# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಆಗಸ್ಟ್ ೨೮, ೨೦೧೪ (ಭಾದ್ರಪದ ೬, ಶಕ ವರ್ಷ ೧೯೩೬)<br>Bangalore, Thursday, August 28, 2014 (Bhadrapada 6, Shaka Varsha 1936) | ಸಂಚಿಕೆ ೩೫<br>Issue 35 |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಛ ನ್ಯಾಯಾಲಯವು ಮಾಡಿದ ನಿಯಮಗಳು

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 4 ಎಲ್‌ಎಜಿ 2014, ಬೆಂಗಳೂರು, ದಿನಾಂಕ: 27-06-2014**

ಶ್ರೀ ಡಿ.ಜಯಪ್ಪ, ಅಪರ ಸರ್ಕಾರಿ ವಕೀಲರು, ಹೊಳಲ್ಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ ಇವರನ್ನು ದಿನಾಂಕ 13-11-2013ರಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಹೊಸದುರ್ಗದ ಇಟಿನೆರರಿ ನ್ಯಾಯಾಲಯದಲ್ಲಿ ದಾಖಲಾಗುವ ಸಿವಿಲ್ ಪ್ರಕರಣಗಳಲ್ಲಿ ಹಾಜರಾಗಿ ನಿರ್ವಹಿಸಲು ಹೆಚ್ಚುವರಿ ಪ್ರಭಾರದಲ್ಲಿರಿಸಲಾಗಿದೆ. ಸದರಿ ವಕೀಲರು ಹೆಚ್ಚುವರಿಯಾಗಿ ಕಾರ್ಯನಿರ್ವಹಿಸುವ ಅವಧಿಯಲ್ಲಿ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 15(I)(II)ರ ಅನ್ವಯ ಪ್ರಯಾಣ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್.ಜಯರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 465**

**S.C. 25**

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 05 ಎಲ್‌ಎಜಿ 2013, ಬೆಂಗಳೂರು, ದಿನಾಂಕ: 28-06-2014**

ಶ್ರೀ ಎ.ಪಿ.ಲೋಕಾಪುರ, ಅಪರ ಸರ್ಕಾರಿ ವಕೀಲರು, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ – ಇವರ ಸೇವೆಯ ಅವಧಿಯು ಮುಕ್ತಾಯವಾಗಿರುವ ಹಿನ್ನಲೆಯಲ್ಲಿ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 26(2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುದ್ದೆಯ ಅಧಿಕಾರವನ್ನು ವಹಿಸಿಕೊಳ್ಳುವ ದಿನಾಂಕದಿಂದ ಜಾರಿಗೆ ಬರುವಂತೆ ಮೂರು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಶ್ರೀ ರಾಜು ಜಿ.ಪೂಜಾರಿ, ವಕೀಲರು, ಇವರನ್ನು ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಅಪರ ಸರ್ಕಾರಿ ವಕೀಲರ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್.ಜಯರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 466**

**S.C. 25**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲಾ 53 ಎಲ್ಎಡಿ 2014, ಬೆಂಗಳೂರು, ದಿನಾಂಕ: 24–06–2014**

ಶ್ರೀಮತಿ ಆರತಿ ಪಾಟೀಲ್, ಅಪರ ಸರ್ಕಾರಿ ವಕೀಲರು, ಗುಲ್ಬರ್ಗಾ ಜಿಲ್ಲೆ ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 18–02–2014ರಿಂದ ಜಾರಿಗೆ ಬರುವಂತೆ ಹೊಸದಾಗಿ ನೇಮಕಾತಿಯಾಗುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಗುಲ್ಬರ್ಗಾ ಜಿಲ್ಲೆಯ ಅಪರ ಸರ್ಕಾರಿ ವಕೀಲರನ್ನಾಗಿ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಸ್.ಜಯರಾಮು,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

P.R. 467
S.C. 25

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲಾ 59 ಎಲ್ಎಜಿ 2013, ಬೆಂಗಳೂರು, ದಿನಾಂಕ: 25–06–2014**

ಶ್ರೀ ಎಸ್.ರಘುನಾಥರೆಡ್ಡಿ, ಅಪರ ಸರ್ಕಾರಿ ವಕೀಲರು, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ – ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 10–10–2013ರಿಂದ ಜಾರಿಗೆ ಬರುವಂತೆ ಈ ದಿನದಿಂದ ಮುಂದಿನ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಅಪರ ಸರ್ಕಾರಿ ವಕೀಲರ ಹುದ್ದೆಯಲ್ಲಿ ಮುಂದುವರೆಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಸ್.ಜಯರಾಮು**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

P.R. 468
S.C. 25

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲಾ 142 ಎಲ್ಎಜಿ 2013, ಬೆಂಗಳೂರು, ದಿನಾಂಕ: 25–06–2014**

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 23ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಸರ್ಕಾರಿ ವಕೀಲರು ಅವರು ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳಿಗೆ ಒಂದು ದಿವಸ ವಿರಾಮ ನೀಡಿ, ಮತ್ತೆ ಅದೇ ಹುದ್ದೆಯಲ್ಲಿ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಡ್ವೋಕೇಟ್ ಜನರಲ್‌ರವರ ಮುಖ್ಯ ಕಛೇರಿ ಹಾಗೂ ಘಟಕ ಕಛೇರಿಯಲ್ಲಿ ಮುಂದುವರೆಸಲಾಗಿದೆ.

| ಕ್ರಮ ಸಂಖ್ಯೆ | ವಕೀಲರ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ಮುಂದುವರೆಸಲಾದ ಹುದ್ದೆ ಹಾಗೂ ಸ್ಥಳ |
|---|---|---|
| 01 | ಕೆ.ಎಸ್.ಪಾಟೀಲ್,<br>ಸರ್ಕಾರಿ ಪ್ಲೀಡರ್, ಕರ್ನಾಟಕ ಉಚ್ಚ ನ್ಯಾಯಾಲಯ,<br>ಧಾರವಾಡ ಘಟಕ ಕಛೇರಿ | ಕರ್ನಾಟಕ ಉಚ್ಚ ನ್ಯಾಯಾಲಯ,<br>ಸರ್ಕಾರಿ ಪ್ಲೀಡರ್, ಅಡ್ವೊಕೇಟ್ ಜನರಲ್ ಘಟಕ ಕಛೇರಿ,<br>ಧಾರವಾಡ |
| 02 | ವಿಜಯಕುಮಾರ್ ಎ.ಪಾಟೀಲ್,<br>ಸರ್ಕಾರಿ ಪ್ಲೀಡರ್, ಕರ್ನಾಟಕ ಉಚ್ಚ ನ್ಯಾಯಾಲಯ,<br>ಧಾರವಾಡ ಘಟಕ ಕಛೇರಿ | ಕರ್ನಾಟಕ ಉಚ್ಚ ನ್ಯಾಯಾಲಯ,<br>ಸರ್ಕಾರಿ ಪ್ಲೀಡರ್, ಅಡ್ವೊಕೇಟ್ ಜನರಲ್ ಮುಖ್ಯ ಕಛೇರಿ,<br>ಬೆಂಗಳೂರು (ನಿಯೋಜನೆ ಮೇರೆಗೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಸ್.ಜಯರಾಮು**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

P.R. 469
S.C. 25

## LAW, JUSTICE AND HUMAN RIGHTS SECRETARIAT

### NOTIFICATION

**No. LAW 287 LCL 2014, Bangalore, Dated: 26th June, 2014**

The resignation tendered by Sri.H.Kantharaja, who was appointed as Additional Advocate General, vide Notification No. Law 33 LAG 2013 dated 19-07-2013 as per Karnataka Law officers (Appointment Conditions of Service) Rules, 1977, has been accepted by the Government of Karnataka with immediate effect.

By Order and in the name the of Governor of Karnataka,
**H.S.JAYARAMU**
Under Secretary to Government (Admn-2),
Law, Justice and Human Rights Department.

**P.R. 470**
**S.C. 50**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಯೋಇ 57 ಯೋವಿವಿ 2013(ಭಾ), ಬೆಂಗಳೂರು, ದಿನಾಂಕ : 30–04–2014.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳಿಗೆ ಈ ಕೆಳಕಂಡ ಸದಸ್ಯರನ್ನು ನಾಮನಿರ್ದೇಶನ ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕಾರೇತರ ಸದಸ್ಯರನ್ನಾಗಿ ಸರ್ಕಾರವು ನಾಮನಿರ್ದೇಶನ ಮಾಡಿದೆ.

**ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | **ಶ್ರೀ ಶಿವನಾಯ್ಕ ಬಿನ್ ವಾಲ್ಯಾನಾಯ್ಕ,** ದೊಡ್ಡ ಜೋಗಿ ಹಳ್ಳಿ, ಚಿಕ್ಕ ಜೋಗಿ ಹಳ್ಳಿ ಅಂಚೆ, ಶಿಕಾರಿಪುರ ತಾಲ್ಲೂಕು. | ಪರಿಶಿಷ್ಟ ಜಾತಿ |
| 2 | **ಶ್ರೀಮತಿ ಲಕ್ಷ್ಮಮ್ಮ ಹೆಚ್.ಕೋಂ ಬಿ.ಹೆಚ್.ಚಂದ್ರಪ್ಪ,** ಉಪ್ಪಾರ ಬೀದಿ, ಹಳೇನಗರ, ಭದ್ರಾವತಿ ತಾಲ್ಲೂಕು | ಮಹಿಳೆ |
| 3 | **ಶ್ರೀ ಮಂಜುನಾಥ್. ಕೆ.ಬಿನ್ ಬಂಗಾರಪ್ಪ,** ಜಯಂತಿ ಗ್ರಾಮ, ಹಳೆ ಸೊರಬ, ಸೊರಬ ತಾಲ್ಲೂಕು | ಹಿಂದುಳಿದ ವರ್ಗ |
| 4 | ಶ್ರೀ ಹೆಚ್.ಜಿ. ಮಲ್ಲಯ್ಯ ಬಿನ್ ಗುಡದಪ್ಪ, ಗುಡುಮಗಟ್ಟೆ, ಆನವೇರಿ ಅಂಚೆ, ಭದ್ರಾವತಿ ತಾಲ್ಲೂಕು | ಸಾಮಾನ್ಯ |
| 5 | **ಶ್ರೀ ಹೆಚ್.ಎಸ್. ರಜೀಯುಲ್ಲಾ ಖಾನ್(ಭಕ್ಷಿ) ಬಿನ್ ಹೆಚ್.ಕರೀಂ ಖಾನ್,** ಸೌಧಾಗರ್ ರೈಸ್ ಇಂಡಸ್ಟ್ರೀಸ್, ಬೈಪಾಸ್ ರಸ್ತೆ, ಶಿವಮೊಗ್ಗ | ಅಲ್ಪ ಸಂಖ್ಯಾತರು |

**PR. 367**
**SC - 25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ,

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಯೋಇ 48 ಯೋವಿವಿ 2014, ಬೆಂಗಳೂರು, ದಿನಾಂಕ : 30–04–2014.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳಿಗೆ ಈ ಕೆಳಕಂಡ ಸದಸ್ಯರನ್ನು ನಾಮನಿರ್ದೇಶನ ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕಾರೇತರ ಸದಸ್ಯರನ್ನಾಗಿ ಸರ್ಕಾರವು ನಾಮನಿರ್ದೇಶನ ಮಾಡಿದೆ.

**ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | **ಶ್ರೀ ಮಹಮ್ಮದ್ ಅಸ್ಲಾಂ ಬಿನ್ ಶೇಖ್ ಅಹ್ಮದ್,** ಮೇಳೆ ಕೋಟೆ, ಕನಕಪುರ ಟೌನ್ | ಅಲ್ಪಸಂಖ್ಯಾತರು |

| ಕ್ರ.ಸಂ. | ಹೆಸರು | ವರ್ಗ |
|---|---|---|
| 2 | **ಶ್ರೀ ಮಾಯಣ್ಣ ಬಿನ್ ಮಾಯಣ್ಣ, ಸಾತನೂರು,** ಕನಕಪುರ ತಾಲ್ಲೂಕು | ಹಿಂದುಳಿದ ವರ್ಗ |
| 3 | **ಶ್ರೀ ಹೆಚ್.ಎಂ.ಮಹದೇವ್ ಬಿನ್ ಮಾದೇಗೌಡ,** ಹೂಕುಂದ ಗ್ರಾಮ ಮತ್ತು ಅಂಚೆ, ಉಯ್ಯಂಬಳ್ಳಿ ಹೋಬಳಿ, ಕನಕಪುರ ತಾಲ್ಲೂಕು | ಸಾಮಾನ್ಯ |
| 4 | **ಶ್ರೀ ವೆಂಕಟೇಶ್ ಬಿನ್ ಲೇಟ್ ಮಲ್ಲೇಗೌಡ,** ಎಂ.ಹೆಚ್.ಎಸ್.ರಸ್ತೆ, ಕನಕಪುರ ಟೌನ್ | ಸಾಮಾನ್ಯ |
| 5 | **ಶ್ರೀ ಚಲುವರಾಜು ಬಿನ್ ಕಾಳಗಿರಿಯಯ್ಯ,** ಮಾಜಿ ಅಧ್ಯಕ್ಷರು, ಹೊಸದುರ್ಗ, ಕನಕಪುರ ತಾಲ್ಲೂಕು | ಪರಿಶಿಷ್ಟ ಜಾತಿ |
| 6 | **ಶ್ರೀಮತಿ ಪರಿಪೂರ್ಣಮ್ಮ ಕೋಂ ಬಾಲರಾಜ್,** ಹಾರೋಬೆಲೆ, ಕನಕಪುರ ತಾಲ್ಲೂಕು | ಮಹಿಳೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ,

**PR. 368**

**SC - 25**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಯೋಇ 95 ಯೋವಿವಿ 2013, ಬೆಂಗಳೂರು, ದಿನಾಂಕ : 30–04–2014.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳಿಗೆ ಈ ಕೆಳಕಂಡ ಸದಸ್ಯರನ್ನು ನಾಮನಿರ್ದೇಶನ ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕಾರೇತರ ಸದಸ್ಯರನ್ನಾಗಿ ಸರ್ಕಾರವು ನಾಮನಿರ್ದೇಶನ ಮಾಡಿದೆ.

**ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕು ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | **ಶ್ರೀ ಡಿ.ಬಿ.ಮಂಜಪ್ಪ ಬಿನ್ ಬಡಿಯಪ್ಪ,** ಬನದಕೊಪ್ಪ, ಸೊರಬ ತಾಲ್ಲೂಕು | ಸಾಮಾನ್ಯ |
| 2 | **ಶ್ರೀ ವಿನಾಯಕಪ್ಪ ಬಿನ್ ಸಣ್ಣಪ್ಪ,** ತವನಂದಿ, ಸೊರಬ ತಾಲ್ಲೂಕು | ಸಾಮಾನ್ಯ |
| 3 | **ಶ್ರೀಮತಿ ನೇತ್ರಾವತಿ ಕೋಂ ಚಂದ್ರಪ್ಪ,** ಮೂಡಗೋಡು, ಸೊರಬ ತಾಲ್ಲೂಕು | ಮಹಿಳೆ |
| 4 | **ಶ್ರೀ ಶಬ್ಬೀರ್ ಕಿಲಿದಾರ್ ಬಿನ್ ನಜೀರ್ ಅಹಮ್ಮದ್ ಕಿಲಿದಾರ್,**ಆನವಟ್ಟಿ, ಸೊರಬ ತಾಲ್ಲೂಕು | ಅಲ್ಪ ಸಂಖ್ಯಾತರು |
| 5 | **ಶ್ರೀ ಹೊನ್ನಪ್ಪ ಬಿನ್ ರಾಮಪ್ಪ,** ಓಟೂರು, ಸೊರಬ ತಾಲ್ಲೂಕು | ಹಿಂದುಳಿದ ವರ್ಗ |
| 6 | **ಶ್ರೀ ಬಿ.ಬಸವರಾಜಪ್ಪ,** ಮಾಜಿ ಸದಸ್ಯರು, ಗ್ರಾಮ ಪಂಚಾಯತ್, ಕೊಡಿಕೊಪ್ಪ, ಜಡೆ ಹೋಬಳಿ, ಸೊರಬ ತಾಲ್ಲೂಕು | ಪರಿಶಿಷ್ಟ ಜಾತಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ,

**PR. 369**

**SC - 25**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಯೋಇ 22 ಯೋವಿವಿ 2014, ಬೆಂಗಳೂರು, ದಿನಾಂಕ : 30–04–2014.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳಿಗೆ ಈ ಕೆಳಕಂಡ ಸದಸ್ಯರನ್ನು ನಾಮನಿರ್ದೇಶನ ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕಾರೇತರ ಸದಸ್ಯರನ್ನಾಗಿ ಸರ್ಕಾರವು ನಾಮನಿರ್ದೇಶನ ಮಾಡಿದೆ.

**ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | **ಶ್ರೀ ಪಿ.ಕೆ.ಚಂದ್ರಶೇಖರ** ಬಿನ್ ಕೃಷ್ಣರಾವ್, ಬಳೆಂಜ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಸಾಮಾನ್ಯ |
| 2 | **ಶ್ರೀ ಹರೀಶ್ ಗೌಡ ಬಿನ್ ತಿಮ್ಮಯ್ಯ ಗೌಡ**, ಪರಪ್ಪಾಜೆ ಮನೆ, ಬಂದಾರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಸಾಮಾನ್ಯ |
| 3 | **ಶ್ರೀ ಶೇಖರ ಕುಕ್ಕೇಡಿ ಬಿನ್ ಸಂಜೀವ,** ಕುಕ್ಕೇಡಿ ಮನೆ, ಕುಕ್ಕೇಡಿ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಪರಿಶಿಷ್ಟ ಜಾತಿ |
| 4 | **ಶ್ರೀ ಸುಕುಮಾರನ್,** ಮೇರ್ಲ ಮನೆ, ಮಿಯಾರು, ಪುದುವೆಟ್ಟು ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಹಿಂದುಳಿದ ವರ್ಗ |
| 5 | **ಶ್ರೀ ಯು.ಕೆ. ಇಸುಬು ಬಿನ್ ಇಬ್ರಾಹಿಂ,** ಪೆದಮಲೆ, ಇಳಂತಿಲ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಅಲ್ಪ ಸಂಖ್ಯಾತರು |
| 6 | **ಶ್ರೀಮತಿ ತನುಜಾ ಶೇಖರ್ ಕೋಂ ಶೇಖರ ಪೂಜಾರಿ,** ಸ್ವಾತಿ ನಿಲಯ, ನಾವುರು ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ಮಹಿಳೆ |

**PR. 370**
**SC - 25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ,

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಯೋಇ 46 ಯೋವಿವಿ 2014, ಬೆಂಗಳೂರು, ದಿನಾಂಕ : 30–04–2014.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಾಮರಾಜನಗರ ಜಿಲ್ಲೆಯ ಚಾಮರಾಜನಗರ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳಿಗೆ ಈ ಕೆಳಕಂಡ ಸದಸ್ಯರನ್ನು ನಾಮನಿರ್ದೇಶನ ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕಾರೇತರ ಸದಸ್ಯರನ್ನಾಗಿ ಸರ್ಕಾರವು ನಾಮನಿರ್ದೇಶನ ಮಾಡಿದೆ.

**ಚಾಮರಾಜನಗರ ಜಿಲ್ಲೆಯ ಚಾಮರಾಜನಗರ ತಾಲ್ಲೂಕು ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | ಶ್ರೀ ಬಿ.ಪಿ.ನಾಗರಾಜ ಮೂರ್ತಿ ಬಿನ್ ಎಸ್. ಪುಟ್ಟಸ್ವಾಮಿ, ಬದನಗುಪ್ಪೆ ಗ್ರಾಮ ಮತ್ತು ಅಂಚೆ ಕಸಬಾ ಹೋಬಳಿ, ಚಾಮರಾಜನಗರ ತಾಲ್ಲೂಕು | ಸಾಮಾನ್ಯ |
| 2 | ಶ್ರೀ ಕುಮಾರ್ ಶಿವಶಂಕರ್ ಬಿನ್ ಲೇ. ಖ.ಮಹದೇವಪ್ಪ,ಉಪ್ಪಾರ ಬೀದಿ, ಆಲೂರು ಗ್ರಾಮ, ಚಂದಕವಾಡಿ ಹೋಬಳಿ, ಚಾಮರಾಜನಗರ ತಾಲ್ಲೂಕು | ಸಾಮಾನ್ಯ |
| 3 | ಶ್ರೀ ಪಿ. ಲಕ್ಷ್ಮೀನರಸಿಂಹಸ್ವಾಮಿ, ಬಿನ್ ಹೆಚ್.ಎಂ. ಪುಟ್ಟಮಾದಯ್ಯ, ಸಿದ್ದಯ್ಯನಪುರ ಗ್ರಾಮ, ಅಟ್ಟುಗೋಳಿಪುರ ಅಂಚೆ ಚಂದಕವಾಡಿ ಹೋಬಳಿ, ಚಾಮರಾಜನಗರ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ನಾಗರಾಜು ಬಿನ್ ನಂಜುಂಡಶೆಟ್ಟಿ, ಕೋಡಿಮಳಿ ಗ್ರಾಮ ಮತ್ತು ಅಂಚೆ, ಚಂದಕವಾಡಿ ಹೋಬಳಿ, ಚಾಮರಾಜನಗರ ತಾಲ್ಲೂಕು | ಹಿಂದುಳಿದ ವರ್ಗ |

**PR. 371**
**SC - 25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ,

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಯೋಇ 16 ಯೋವಿವಿ 2014, ಬೆಂಗಳೂರು, ದಿನಾಂಕ : 30-04-2014.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳಿಗೆ ಈ ಕೆಳಕಂಡ ಸದಸ್ಯರನ್ನು ನಾಮನಿರ್ದೇಶನ ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕಾರೇತರ ಸದಸ್ಯರನ್ನಾಗಿ ಸರ್ಕಾರವು ನಾಮನಿರ್ದೇಶನ ಮಾಡಿದೆ.

**ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | ಶ್ರೀ ಸಿದ್ಧಪ್ಪಗೌಡ ಪೋ॥ಪಾ॥ ತಂದೆ ವೀರನಗೌಡ, | ಸಾಮಾನ್ಯ |
| 2 | ಶ್ರೀ ಸಂಗನಗೌಡ ತಂದೆ ಶಿವರಾಜಪ್ಪ ಗೌಡ | ಸಾಮಾನ್ಯ |
| 3 | ಶ್ರೀ ಚನ್ನಪ್ಪ ನಾಯಕ ತಂದೆ ಮಾನಸಯ್ಯ | ಪರಿಶಿಷ್ಟ ಪಂಗಡ |
| 4 | ಶ್ರೀ ಖಾಜಾಸಾಬ ತಂದೆ ಅಲಿಸಾಬ | ಅಲ್ಪ ಸಂಖ್ಯಾತರು |
| 5 | ಶ್ರೀ ಶಿವಪ್ಪ ತಂದೆ ಸಂಜೀವಪ್ಪ | ಹಿಂದುಳಿದ ವರ್ಗ |
| 6 | ಶ್ರೀಮತಿ ವಿಜಯಲಕ್ಷ್ಮೀ ಗಂಡ ಭೀಮಣ್ಣ ಗುಮೇದಾರ | ಮಹಿಳೆ |

**PR. 372**
**SC - 25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ,

## HOME SECRETARIAT

### NOTIFICATION

**No. HD 234 SST 2014, Bangalore, Dated: 21/04/2014.**

Whereas the Government of Karnataka are satisfied that the place specified in the Schedule below are being used for the purpose of public character (Power Grid Corporation of India Ltd, Askihal Village, Raichur Taluk, Raichur District) and the information with respect therto or the destruction of obstruction therof, or interference therewith, would be useful to an enemy.

Now, therefore, in exercise of the powers conferred by sub-clause (d) of clause (8) of section 2 of the Official Secrets Act, 1923, (Central Act XIX of 1923) read with Notification No. 21/20/62 Poll (1) dated 4th May 1963 of the Government of India, Ministry of Home Affairs, New Delhi, the Government of Karnataka hereby declare that the place specified in the schedule below, shall be prohibited place for the purpose of the said Act.

| SL. No. | Name of the Place | Total Ares and S.No's | | | Boundaries |
|---|---|---|---|---|---|
| | | **Village** | **S.No.** | **Extent** | |
| 1 | Power Grid Corporation Of india Ltd., Raichur (T), Askihal (V), Raichur District. | Askihal Village (Total 92-29 acre's) | 95, 96/1, 96/2, 96/3, 97/1, 97/2, 103, 104, 105/1, 105/2, 130/2,137/1, 137/2, 138, 139/1, 139/2, 139/3 | 92-29 acre's | **North:** State Highway No.20 (Raichur-Belgaum Road) **South**: Open Agriculture Land Survey Nos. 106, 102, 98, 107 **East**: Open Agriculture Land Survey Nos. 93,94 **West**: Open Agriculture Land Survey No. 129 |

By Order and in the name of the Governor of Karnataka

**Govindaswamy**

Under Secretary to Government

Home Department [Law & order]

**PR- 361**
**SC-50**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಸಿಒ 111 ಸಿಎನ್‌ಎಸ್ 2014, ಬೆಂಗಳೂರು, ದಿನಾಂಕ : 07-05-2014.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ ಉಪ ಪ್ರಕರಣ (4ಬಿ)-(1)ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಚಿತ್ರದುರ್ಗ ಜಿಲ್ಲೆ ಮತ್ತು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಚಿತ್ರದುರ್ಗ**. ಇದರ ಆಡಳಿತ ಮಂಡಳಿಗೆ **ಶ್ರೀ ಮಣ್ಣೇರು ಕರಿಯಪ್ಪ ಬಿನ್ ಸಣ್ಣನಾಗಪ್ಪ, ಹುಲ್ಲೇಹಾಳ್ ಗೊಲ್ಲರಹಟ್ಟಿ, ಚಿತ್ರದುರ್ಗ ತಾ॥ ಮತ್ತು ಜಿಲ್ಲೆ** ಇವರನ್ನು ನಾಮನಿರ್ದೇಶಿಸಿ ಹೊರಡಿಸಿದ ಸಮಸಂಖ್ಯೆಯ ದಿನಾಂಕ: 06/05/2014ರ ಅಧಿಸೂಚನೆಯನ್ನು ಹಿಂಪಡೆದು **ಶ್ರೀ ಮಣ್ಣೇರು ನಾಗಪ್ಪ ಬಿನ್ ಸಣ್ಣನಾಗಪ್ಪ, ಹುಲ್ಲೇಹಾಳ್ ಗೊಲ್ಲರಹಟ್ಟಿ, ಚಿತ್ರದುರ್ಗ ತಾ॥ ಮತ್ತು ಜಿಲ್ಲೆ** ಇವರನ್ನು **ಚಿತ್ರದುರ್ಗ ಜಿಲ್ಲೆ ಮತ್ತು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಚಿತ್ರದುರ್ಗ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

**PR. 362**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಆರ್.ನಾಗರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಹಕಾರ ಇಲಾಖೆ,

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ ಸಿಆಸುಇ 23 ನಾಸೇಖಾ 2014/ಪಿ1, ಬೆಂಗಳೂರು, ದಿನಾಂಕ : 26-05-2014.**

ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011ರ (ಕರ್ನಾಟಕ ಅಧಿನಿಯಮ 01, 2012) ಸೆಕ್ಷನ್ 04 ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಅನುಸೂಚಿಯನ್ನು ಈ ಕೆಳಗಿನಂತೆ ತಿದ್ದುಪಡಿ ಮಾಡಿದೆ. ಯಾವುದೆಂದರೆ.

ಸದರಿ ಅಧಿನಿಯಮದ ಅನುಸೂಚಿಯಲ್ಲಿ :

ಶೀರ್ಷಿಕೆ-19ರ ಸಹಕಾರ ಇಲಾಖೆಯ, ಉಪ ಶೀರ್ಷಿಕೆ-II ರ ಕೃಷಿ ಮಾರಾಟ ಇಲಾಖೆಗೆ ಸಂಬಂಧಿಸಿದಂತೆ, "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011" ರ ಅನುಸೂಚಿಯಲ್ಲಿ :

1) ಕ್ರಮ ಸಂಖ್ಯೆ: 13ರ ಅಂಕಣ 2ರಲ್ಲಿನ "ಉಗ್ರಾಣ ಪರವಾನಿಗೆ" ಎಂಬ ಸೇವೆಯ ಬದಲಾಗಿ "ಖಾಸಗಿ ಉಗ್ರಾಣ ನಿಗಮ/ಸಹಕಾರ ಸಂಘಗಳಿಗೆ ಉಗ್ರಾಣ ಪರವಾನಗಿ" ಎಂಬುದಾಗಿ ಓದಿಕೊಳ್ಳತಕ್ಕದ್ದು.
2) ಕ್ರಮ ಸಂಖ್ಯೆ: 24ರ ಅಂಕಣ 2ರಲ್ಲಿನ "ಲೀವ್ ಅಂಡ್ ಲೈಸೆನ್ಸ್ ಮೇಲೆ ಅಂಗಡಿ, ಗೋದಾಮು ಉಗ್ರಾಣ, ಕ್ಯಾಂಬಿನ್, ಸಂಡ್ರಿಷಾಪ್‌ಗಳ ಹಂಚಿಕೆ" ಎಂಬ ಸೇವೆಯ ಒದಲಾಗಿ "ಕ.ಕೃ.ಉ.ಮಾ.ವ್ಯ (ಮಾರುಕಟ್ಟೆ ಪ್ರಾಂಗಣದಲ್ಲಿನ ಆಸ್ತಿ ಹಂಚಿಕೆ ನಿಯಂತ್ರಣ) ನಿಯಮಾವಳಿ 2004ರ ನಿಯಮ-2(9)ರನ್ವಯ ನಿಗದಿಪಡಿಸಿದ ಸೇವಾ ಸಂಸ್ಥೆಗಳಿಗೆ ಲೀವ್ ಅಂಡ್ ಲೈಸೆನ್ಸ್ ಮೇಲೆ ಅಂಗಡಿ, ಗೋದಾಮು ಉಗ್ರಾಣ, ಕ್ಯಾಂಟೀನ್, ಸಂಡ್ರಿಷಾಪ್‌ಗಳ ಹಂಚಿಕೆ" ಎಂಬುದಾಗಿ ಓದಿಕೊಳ್ಳತಕ್ಕದ್ದು.
3) ಕ್ರಮ ಸಂಖ್ಯೆ: 25 ರ ಅಂಕಣ 2ರಲ್ಲಿನ "ಲೀಸ್-ಕಂ-ಸೇಲ್ ಆಧಾರದಡಿ ನಿವೇಶನ, ಅಂಗಡಿ, ಗೋದಾಮು ಹಂಚಿಕೆ" ಎಂಬ ಸೇವೆಯ ಬದಲಾಗಿ "ಕ.ಕೃ.ಉ.ಮಾ.ವ್ಯ (ಮಾರುಕಟ್ಟೆ ಪ್ರಾಂಗಣದಲ್ಲಿನ ಆಸ್ತಿ ಹಂಚಿಕೆ ನಿಯಂತ್ರಣ) ನಿಯಮಾವಳಿ 2004ರ ನಿಯಮ-2(9)ರನ್ವಯ ನಿಗದಿಪಡಿಸಿದ ಸೇವಾ ಸಂಸ್ಥೆಗಳಿಗೆ ಲೀಸ್-ಕಂ-ಸೇಲ್ ಆಧಾರದಡಿ ನಿವೇಶನ, ಅಂಗಡಿ, ಗೋದಾಮು ಹಂಚಿಕೆ" ಎಂಬುದಾಗಿ ಓದಿಕೊಳ್ಳತಕ್ಕದ್ದು.
4) ಕ್ರಮ ಸಂಖ್ಯೆ: 24 ರ ಅಂಕಣ 05 ರಲ್ಲಿ "ಹೆಚ್ಚುವರಿ ನಿರ್ದೇಶಕರು (ಆಡಳಿತ) ಕೃಷಿ ಮಾರಾಟ ಇಲಾಖೆ" ಎಂದಿದ್ದು, ಇದನ್ನು "ಹೆಚ್ಚುವರಿ ನಿರ್ದೇಶಕರು (ಯೋಜನೆ) ಕೃಷಿ ಮಾರಾಟ ಇಲಾಖೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.
5) ಕ್ರಮ ಸಂಖ್ಯೆ: 25 ರ ಅಂಕಣ 05 ರಲ್ಲಿ "ಹೆಚ್ಚುವರಿ ನಿರ್ದೇಶಕರು (ಆಡಳಿತ) ಕೃಷಿ ಮಾರಾಟ ಇಲಾಖೆ" ಎಂದಿದ್ದು, ಇದನ್ನು "ಹೆಚ್ಚುವರಿ ನಿರ್ದೇಶಕರು (ಯೋಜನೆ) ಕೃಷಿ ಮಾರಾಟ ಇಲಾಖೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 23 NaSeKha /2014/ P1, Bangalore, Dated: 26/05/2014.**

In exercise of the powers conferred by Section 4 of the Karnataka Sakala Services Act, 2011 (Karnataka Act 1 of 2012), the Government of Karnataka, hereby amends the Schedule appended to the said Act, as follows, namely:-

**Under the heading-19 "Co-operation Department" Sub-heading-II "Agriculture Marketing Department" :-**

1) **"Warehouse Licence" at serial No.13, in column 02,** shall be substituted and read as **"Warehouse Licence for Private warehouse/Co-operative Societies"**
2) **"Allotment of Shops, Godowns warehouse, Canteen and Sundry Shops on Leave and Licence Basis" at seria No. 24, in column 02,** shall be substituted and read as **"Allotment of Shops, Godowns**

**Warehouse, Canteen and Sundry Shops on Leave and Licence Basis to the Service Institutions notified under rule 2(9) of K.A.P.M(Regulation & Allotment of property in Market Yards) Rules 2004"**

3) **"Allotment of Shops, Godowns on Lease cum Sale" at serial No.25, in column 02**, shall be substituted and read **as "Allotment of Sites, Shops and Godowns on Lease cum Sale Basis to the Service Institutions notified under rule 2(9) of K.A.P.M(Regulation & Allotment of property in Market Yards) Rules 2004"**

4) **"Additional Director (Admn) Agricultural Marketing Department" at Serial No.24, in Column 05,** shall be substituted and read as **"Additional Director (Planning) Agricultural Marketing Department".**

5) **"Additional Director (Admn) Agricultural Marketing Department"** at Serial No. 25, in Column 05, shall be substituted and read as **"Additional Director (Planning) Agricultural Marketing Department".**

By Order and in the name of the Governor of Karnataka,

**B.N. Varaprasad Reddy**

Administrative officer and Ex-officio Under Secretary to Government, Department of Personnel & Administrative Reforms (AR-Citizen Services)

**PR- 375**

**SC-5000**

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ ಕಾಇ 40 ಎಲ್ಎಂಡಬ್ಲ್ಯೂ 2012 ಬೆಂಗಳೂರು, ದಿನಾಂಕ : 17-05-2014.**

ಕರ್ನಾಟಕ ರಾಜ್ಯಾದ್ಯಂತ **"ಬಟ್ಟೆಗಳಿಗೆ ಡೈ ಮಾಡಿ ಪ್ರಿಂಟ್ ಹಾಕುವ"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪ್ರಥಮಬಾರಿಗೆ ನಿಗದಿಪಡಿಸುವ ಸಲುವಾಗಿ ಕರಡು ಅಧಿಸೂಚನೆ ಸಂಖ್ಯೆ: ಕಾಇ 40 ಎಲ್ಎಂಡಬ್ಲ್ಯೂ 2012, ದಿ:25-09-2012ನ್ನು ರಾಜ್ಯ ಪತ್ರದ ವಿಶೇಷ ಪತ್ರಿಕೆ ಭಾಗ 4ಎ ರಲ್ಲಿ ದಿನಾಂಕ: 25-09-2012 ರಂದು ಪ್ರಕಟಿಸಿ, ಅದರಿಂದ ಬಾಧಿತರಾಗುವ ವ್ಯಕ್ತಿಗಳಿಂದ ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಕರಡು ಅಧಿಸೂಚನೆಯ ಮೇಲೆ ಯಾರಿಂದಲೂ ಆಕ್ಷೇಪಣೆಗಳು/ಸಲಹೆಗಳು ಸ್ವೀಕೃತವಾಗಿರುವುದಿಲ್ಲ, ಕರಡು ಅಧಿಸೂಚನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಸಲಹಾ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ:11)ರ ಸೆಕ್ಷನ್ 5(1)(ಬಿ) ಮತ್ತು ಸೆಕ್ಷನ್ 3(1)(ಎ) ಅಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯದಾದ್ಯಂತ ಯಾವುದೇ **"ಬಟ್ಟೆಗಳಿಗೆ ಡೈ ಮಾಡಿ ಪ್ರಿಂಟ್ ಹಾಕುವ"** ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಿದೆ.

## ಅನುಸೂಚಿ

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು | |
|---|---|---|---|
| | | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ |
| I | **ಅತಿ ಕುಶಲ** | | |
| 1 | ಮ್ಯಾನೇಜರ್/ಪ್ರೊಡಕ್ಷನ್‌ಮ್ಯಾನೇಜರ್/ ಪ್ರಿಂಟಿಂಗ್ ಮ್ಯಾನೇಜರ್ | 7301-19 | 280-81 |
| 2 | ಸೂಪರ್‌ವೈಸರ್/ಅಸಿಸ್ಟೆಂಟ್ ಮ್ಯಾನೇಜರ್ | 7041-19 | 270-81 |
| 3 | ಡಿಸೈನರ್/ಪ್ರಿಂಟರ್ಸ್ | 6859-06 | 263-81 |
| 4 | ಕೆಮಿಕಲ್ಸ್ ಮಿಶ್ರಣ ಮಾಡುವವರು | 6703-06 | 257-81 |
| 5 | ನೂಲನ್ನು ಕೆಮಿಕಲ್ಸ್‌ನಲ್ಲಿ ಬೇಯಿಸುವವರು | | |
| II | **ಕುಶಲ ಕೆಲಸಗಾರರು** | | |
| 1 | ಎಲೆಕ್ಟ್ರಿಷಿಯನ್ | 6547-06 | 251-81 |
| 2 | ವೈಂಡರ್/ಫಿಟ್ಟರ್/ಫೈರ್‌ಮನ್ | 6443-06 | 247-81 |
| 3 | ಸ್ಪಿನ್ನಿಂಗ್/ಸ್ಪಿನ್ನಿಂಗ್ ಮೆಂಟೆನನ್ಸ್ | 6339-06 | 243-81 |
| 4 | ಕಾರ್ಡಿನ್/ಜೋನ್ ಕ್ಲಿಯರಿಂಗ್ | | |

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು | |
|---|---|---|---|
| | | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ |
| 5 | ನೂಲನ್ನು ಹದ ಮಾಡುವವರು | 6261–06 | 240–81 |
| 6 | ಬಣ್ಣ ಹಾಕುವವರು | | |
| 7 | ರೋಟರ್ ಆಪರೇಟರ್/ರೋಲ್ ಕವರರ್ಸ್ | 6157–06 | 236–81 |
| 8 | ಟ್ರೆಶರ್ಸ್ | | |
| III | **ಅರೆಕುಶಲ** | | |
| 1 | ಪ್ರಿಂಟಿಂಗ್ ಸಹಾಯಕ/ಸಹಾಯಕ ಆಪರೇಟರ್ | 5949–06 | 228–81 |
| 2 | ನೂಲು ಬಿಡಿಸುವವರು/ಟೇಪ್ ಮ್ಯಾನ್ | | |
| 3 | ಪ್ಯಾಕರ್ | | |
| IV | **ಕುಶಲರಲ್ಲದವರು** | | |
| 1 | ಸ್ಪಿನ್ನಿಂಗ್ ಹೆಲ್ಪರ್ಸ್/ಪ್ಯಾಕರ್ | 5663–06 | 217–81 |
| 2 | ಮಿಕ್ಸರ್ಸ್/ಪ್ರೇಂ ಕೂಲೀಸ್/ಡ್ರೈಯರ್ಸ್ | | |
| 3 | ಹೆಲ್ಪರ್ಸ್/ಕ್ಲೀನರ್ಸ್ | 5490–94 | 211–19 |
| V | **ಡ್ರೈವರ್ಸ್** | | |
| 1 | ಲಾರಿ ಡ್ರೈವರ್ | 6417–06 | 246–81 |
| 2 | ಕಾರ್/ಜೀಪ್ ಡ್ರೈವರ್ | 6027–06 | 231–81 |
| 3 | ಲಾರಿ/ ಕಾರ್/ಜೀಪ್ ಕ್ಲೀನರ್ | 5507–06 | 211–81 |
| VI | **ಕಛೇರಿ ಸಿಬ್ಬಂದಿ** | | |
| 1 | ಮ್ಯಾನೇಜರ್/ಪರ್ಸನಲ್ ಆಫೀಸರ್ | 7301–19 | 280–81 |
| 2 | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್‌ಪರ್ಸನಲ್ ಮ್ಯಾನೇಜರ್ | 7041–06 | 270–81 |
| 3 | ಅಕೌಂಟೆಂಟ್/ಕ್ಲರ್ಕ್/ಕ್ಯಾಷಿಯರ್/ಸ್ಟೋರ್ ಕೀಪರ್ | 6640–92 | 255–42 |
| 4 | ಕಂಪ್ಯೂಟರ್ ಆಪರೇಟರ್/ಬೆರಳಚ್ಚುಗಾರರು/ಸ್ವಾಗತಕಾರರು | 6490–90 | 249–65 |
| 5 | ಪ್ಯೂನ್/ವಾಚ್‌ಮನ್/ಜವಾನ/ಸ್ವೀಪರ್/ಗಾರ್ಡನರ್ | 5490–94 | 211–19 |

**ತುಟ್ಟಿಭತ್ಯೆ :–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 5075 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 5075 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2012 ರಿಂದ ಡಿಸೆಂಬರ್ 2012)ರ ಸರಾಸರಿ ಆಧಾರದ ಮೇಲೆ 2013 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

   ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–

   ಅ) ಮಾಸಿಕ ವೇತನವನ್ನು ಪಡೆಯುವವರು:– ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತಿಂಗಳ ತುಟ್ಟಿಭತ್ಯೆ

   ಆ) ದಿನಗೂಲಿ ವೇತನ ಪಡೆಯುವವರು :–

   ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ದಿನದ ತುಟ್ಟಿಭತ್ಯೆ

   26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಮದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ,**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

**PR. 359**

**SC-200**

## HOME SECRETARIAT

### NOTIFICATION

**No.HD 89 POP 2014, Bangalore, Dated: 26-05-2014.**

In exercise of the powers conferred by the clause (s) of section 2 of the Code of Criminal Procedure, 1973 (Central Act 2 of 1974), the Government of Karnataka, hereby declare that with effect from the date of publication of this notification in the Official Gazette, the areas and places specified in column (3) of the schedule below, shall cease to be within the jurisdiction of the police station specified in column (4) thereof and the said areas and places shall be included within the jurisdiction of the police station specified in column (2) thereof.

**SCHEDULE**

| Name of the District Sub-division | Police Station in which the area and places mentioned in column (3) shall be included | Name of the areas and places | Police Station from whose jurisdiction the areas and places mentioned in column (3) shall be excluded |
|---|---|---|---|
| (1) | (2) | (3) | (4) |
| Mangalore City Police Commissionerate/ Mangalore North Sub-Division | Mangalore North Traffic Police Station/Traffic Sub-Division | 1. All main and interior roads belonging to Mulki Police Station jurisdiction, including National Highway-66, State Highways and other roads.<br><br>**Places:**<br>(1) Haleangady Junction<br>(2) Mulki Bus Stand<br>(3) Mulki Junction<br>(4) Bappanadu Junction | 1. Mulki Police Station |

| (1) | (2) | (3) | (4) |
|---|---|---|---|
| | | (5) Vijaya Sannidi<br>(6) Karnadu Junction<br>(7) S Kody .<br>(8) Kinnigoli Junction<br>(9) Moorukaveri Junction | |
| | | 2. All main and interior roads belonging to Surathkal Police Station Jurisdiction, including National Highway-66, State Highways and other roads<br>**Places:**<br>(1) Chitrapur<br>(2) Honnakatte Junction<br>(3) Hosabettu<br>(4) Vidyadayini School<br>(5) City Bus Stop<br>(6) Surathkal Junction<br>(7) Mooda Market.<br>(8) Surathkal Bus Stop<br>(9) NITK College<br>(10) Mukka Junction<br>(11) Mukka Check Post<br>(12) MRPL Junction<br>(13) Ganeshpur<br>(14) 2nd Block Katipalla<br>(15) Chitrapur<br>(16) Tadambail | 2. Surathkal Police Station |
| | | 3. All main and / interior roads belonging to Panambur Police Station Jurisdiction, including National Highway- 66, State Highways and other roads.<br>**Places:**<br>(1) Bengre<br>(2) Tannirbaavi<br>(3) MCF ,<br>(4) NMPT<br>(5) Beach road<br>(6) Bykampady<br>(7) Kulai<br>(8) Jokatte | 3. Panambur Police Station |

| (1) | (2) | (3) | (4) |
|---|---|---|---|
| | | 4. All main and interior roads belonging to Kavoor Police Station Jurisdiction, including National Highway-66, State Highways and other roads.<br>**Places:**<br>(1) Kunjathbail<br>(2) Maravoor<br>(3) Marakada<br>(4) Jyothinagar<br>(5) Kavoor<br>(6) Panjimogru<br>(7) Kulur<br>(8) Akashbavan<br>(9) Derebail<br>(10) Haripadav<br>(11) Bondel | 4. Kavoor Police Station |
| | | 5. Airport road only from the boundary Kavoor Police Station jurisdiction, i.e., from Maravoor bridge to New Airport terminal both entry and exit roads. | 5. Bajpe Police Station |

The Traffic Police station specified in column (2) shall be responsible for investigation of the offences under:-

(1) The Karnataka Traffic Control Act, 1960 (Karnataka Act 18 of 1960);

(2) The Karnataka Traffic (Control of Public Vehicles) Rules, 1979;

(3) The Karnataka Traffic Control (Regulation of Traffic on Highways) Rules, 1979 and the Karnataka Traffic Control Rules, 1979;

(4) The Karnataka Public Conveyance Act, 1961 (Karnataka Act 20 of 1962);

(5) The Motor Vehicles Act, 1988 (Central Act 59 of 1988) and the Karnataka Motor Vehicles Rules, 1989; and

(6) Offences under sections 279, 304(A), 337, 338 and 427 of Indian Penal Code, 1860.

By Order and in the name of the Governor of Karnataka,

**PR-391**

**SC-100**

**H.R. Puttegowda**

Under Secretary to Government,

Home Department (Police Expenditure)

## HOME SECRETARIAT

### NOTIFICATION

**No.HD 90 POP 2014, Bangalore, Dated: 27-05-2014.**

In exercise of the powers conferred by clause (s) of section 2 of the Code of Criminal Procedure, 1973 (Central Act 2 of 1974), the Government of Karnataka, hereby declare that with effect from the date of publication of this notification in the Official Gazette, the areas and places specified in column (3) of the schedule below, shall cease to be within the jurisdiction of the police station specified in column (4) thereof. and the said areas and'places shalll be included in the police station specified in column (2) thereof.

**SCHEDULE**

| Name of the unit / Sub-Division / Police circle | Name of the Police Station in which the area and places mentioned in column (3) shall be included | Name of areas and places | Name of the Police Station from whose jurisdiction the areas and places mentioned in column (3) shall be excluded |
|---|---|---|---|
| (1) | (2) | (3) | (4) |
| Dy SP, Nanjangud Sub-Division and CPI, Nanjangud Circle Mysore District | Nanjangud Traffic Police Station | (1) Nanjangud Town Police Station & Nanjangud Rural Police Station<br>(2) National Highway-212 (APMC Mysore-Nanjangud-Gundlupet Road (Mysore District Limit)<br>(3) Mysore-Chamarajanagara Road (Nanjangud-Kowlande Ps limit)<br>(4) Appollo Circle<br>(5) Hullahalli Circle & Hullahalli Road<br>(6) Chinthamani Ganapathi Temple<br>(7) 6th Cross, R.P.Road<br>(8) KSRTC Bus Stand<br>(9) Railway Station<br>(10) Private Bus stand<br>(11) Mudi Katte<br>(12) Geetha Medicals<br>(13) Rakshasa Mantapa Circle<br>(14) Corner Ganapathi temple<br>(15) Old Police Station<br>(16) Cormel School<br>(17) Srikanteshwara Temple & Surrounding<br>(18) Kempegowda Circle & Junior College ooty Road<br>(19) Kathwadipura Circle<br>(20) Devarimmanahalli gate<br>(21) Thandavapura Bus Stand<br>(22) SIPM Factory<br>(23) Kalale gate<br>(24) Hosahalli gate | Nanjangud Town Police Station, Nanjangud Rural Police Station Badanvalu Police Station Kowlande Police Station Hullahalli Police Station |

The Traffic Police Station specified in column (2) shall be responsible for investigation of the offences under: -,

(1) The Karnataka Traffic Control Act, 1960 (Karnataka Act 18 of 1960) ;

(2) The Karnataka Traffic (Control of Public Vehicles) Rules, 1979;

(3) The Karnataka Traffic Control (Regulation of Traffic on Highways) Rules, 1979 and the Karnataka Traffic Control Rules, 1979 ;

(4) The Motor Vehicles Act, 1988 (Central Act 59 of 1988) and the, Karnataka Motor Vehicles Rules, 1989)

(5) Offences under section 279, 304(a), 337, 338 and 427 of Indian penal Code, 1860:

By Order and in the name of the Governor of Karnataka,

**PR-392**

**SC-100**

**H.R. Puttegowda**

Under Secretary to Government,

Home Department (Police Expenditure)

## HOME SECRETARIAT

### NOTIFICATION

**No.HD 34 POP 2014, Bangalore, Dated: 27-05-2014.**

In exercise of the powers conferred by clause (s) of section 2 of the Code of Criminal Procedure, 1973 (Central Act 2 of 1974), and in partial modification of notification issued in this behalf the Government of Karnataka, hereby declare that with effect from the date of publication of this notification in the Official Gazette, the areas and places specified in column (3) of the schedule below, shall cease to-be within the jurisdiction of the police station specified in column (4) thereof and the said areas and places shall be included within the jurisdiction of the police station specified in column (2) thereof.

**SCHEDULE**

| Name of the unit / Sub-Division / Police Circle | Name of the Police Station in which the area and places mentioned in column (3) shall be included | Name of the areas and places | Name of the Police Station from whose jurisdiction the areas and places mentioned in column (3) shall be excluded |
|---|---|---|---|
| (1) | (2) | (3) | (4) |
| Chamarajanagara District, Chamarajanagara Sub-Division | Chamarajanagara Traffic Police Station Chamarajanagara | **I. Chamarajanagar Town Police Station Limits.-**<br>(1) Nanjangud road State Highway-80 upto Saint Paul Church<br>(2) Gundlupete road State Highway-81 upto Sowhardhayan timber depot<br>(3) Billigiri Rangana Hills road State Highway-80 upto Ramasamudra Milk Dairy<br>(4) Sathyamangalam road National Highway-209 upto Indraprastha petrol bunk<br>(5) S.M.Hally road National Highway-209 upto Government silk Market<br>(6) Railway extension<br>(7) Megala nayaka badavane<br>(8) Megala Uppara bada vane<br>(9) Shankarapura- Brama ramba badavane<br>(10) Chennipuramole extension<br>(11) Bhagirathanagara<br>(12) Pragatinagara<br>(13) New housing board extension<br>(14) Ramasamudra extension<br>(15) Siddarthanagara extension<br>(16) Housing board extension<br>(17) Karinanjanapura extension<br>(18) A.J.Coloney<br>(19) Somanna layout<br>(20) Dr.B.R. Ambedkar badavane<br>(21) K:P .Mohalla<br>(22) Mubarakh Mohalla<br>(23) Kuvempu badavane<br>(24) Ahmed Nagara<br>(25) Varadarajapura<br>(26) Galipura | Chamarajanagara Town Police Station Chamarajanagara |

| (1) | (2) | (3) | (4) |
|---|---|---|---|
| | | (27) Beedicolony<br>(28) A.P.Mohalla<br>(29) G .K.Mohalla<br>(30) Mahadeshwara Colony<br>(31) Bhujangeshwara badavane<br>(32) Basaveshwaranagara<br>(33) Dr. Babu Jagajeevanram badavane | |
| | | **II. Chamarajanagara East Police Station Limits.-**<br>(1) Biligiri Rangana Hills road State Highway-80 from milk dairy upto Booddithittu cross<br>(2) Sathyamangalam road National Highway-209 from Indra prastha petrol bunk up to somavarpete Nijaguna layout<br>(3) Santemarana Hally road National Highway-209 from silk market upto Doddaravapete cross | The entire area of Chamarajanagar East Police Station Limits |
| | | **III. Chamarajanagar Rural Police Station Limits.-**<br>(1) Gundlupete road State Highway-81 from Sowhardhya timber depot upto Shivapura village<br>(2) Nanjangud road State Highway-80 from Saint Paul Church upto Kalanahundi cross | The entire area of Chamarajanagar Rural Police Station Limits |

The Traffic Police Station specified in column (2) shall be responsible for investigation of the offences under :-

(1) The Karnataka Traffic Control Act, 1960 (Karnataka Act No. 18 of 1960);

(2) The Karnataka Traffic (Control of Public Vehicles ) Rules, 1979;

(3) The Karnataka Traffic Control (Regulation of Traffic on Highways) Rules, 1979 and the Karnataka Traffic Control Rules, 1979;

(4) The Motor Vehicles Act, 1988 (Central Act 59 of 1988) and the Karnataka Motor Vehicles Rules, 1989

(5) Offences under section 279, 304(a), 337, 338 and 427 of Indian penal Code, 1860.

By Order and in the name of the Governor of Karnataka,

**PR-393** **H.R. Puttegowda**

**SC-100** Under Secretary to Government,

Home Department (Police Expenditure)

## HOME SECRETARIAT

**ORDER**

**No.HD 72 SST 2013, Bangalore, Dated: 03-06-2014.**

WHEREAS the Government of Karnataka having regard to the circumstances prevailing in the state are satisfied that it is necessary that all Commissioners of Police and all the District Magistrates to be empowered to exercise the powers under sub-section (2) of section 3 of the Karnataka Prevention of Dangerous Activities of Boot-leggers, Drug-Offenders, Gamblers, Goondas, Immortal Traffic Offenders and Slum-Grabbers Act, 1985 (Karnataka Act No.12 of 1985).

Now, therefore in exercise of the powers conferred by sub-section (2) of Section 3 of the Karnataka Prevention of Dangerous Activities of Boot-leggers, Drug-Offenders, Gamblers, Goondas, Immortal Traffic Offenders. and Slum- Grabbers Act, 1985 the Government of Karnataka hereby direct that all the Commissioners of Police and all the District Magistrates in the State shall exercise the powers conferred by sub-section (1) of Section 3 of the Act within the limits of their jurisdiction for a period of three months **from 10/06/2014 to 09-09-2014 .**

By Order and in the name of the Governor of Karnataka,

**PR-395** **GOVINDASWAMY**

**SC-50** Under Secretary to Government,

Home Department (Law & Order)

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಾರಿಇ 09 ಸ್ವೀರಸ 2014, ಬೆಂಗಳೂರು, ದಿನಾಂಕ: 26–05–2014.**

ಮಾಹಿತಿ ಹಕ್ಕು ಅಧಿನಿಯಮ 2005 ರ ಪ್ರಕರಣ 4(1) (ಎ) ಮತ್ತು 4(1)(ಬಿ) (2005 ರ ಕೇಂದ್ರ ಅಧಿನಿಯಮ ಸಂಖ್ಯೆ 22) ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಾರಿಗೆ ಇಲಾಖೆಗೆ ಸಂಬಂಧಿಸಿದ ಮಾಹಿತಿಯನ್ನು ಅನುಬಂಧಿಸಿ ಜನಸಾಮಾನ್ಯರ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಲಾಗುತ್ತಿದೆ.

ಸದರಿ ಮಾಹಿತಿಗಳು ಇಲಾಖೆಯ ವೆಬ್‌ಸೈಟ್ www.karnataka.gov.in/transport-secretariat/ ರಲ್ಲಿಯೂ ಸಹ ಲಭ್ಯವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಬೀರೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಾರಿಗೆ ಇಲಾಖೆ.

**ಮಾಹಿತಿ ಹಕ್ಕು ಅಧಿನಿಯಮ 2005 ರ ಕಲಂ 4(1) (ಬಿ)ರ ಪಾಲನೆಗೆ ಸಂಬಂಧಿಸಿದಂತೆ ಮಾಹಿತಿ**

**(i) ಸಾರಿಗೆ ಇಲಾಖೆಯ (ಕರ್ನಾಟಕ ಸರ್ಕಾರದ ಸಚಿವಾಲಯದ) ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

**ಸಾರಿಗೆ ಇಲಾಖೆ ಸಚಿವಾಲಯದ ವ್ಯವಹಾರಗಳನ್ನು ಈ ಮುಂದಿನ ಶಾಖೆಗಳ ಮೂಲಕ ಅಂದರೆ,**

1) ರಾಜ್ಯ ಸಾರಿಗೆ ಉದ್ಯಮಗಳ ಶಾಖೆ.
2) ಮೋಟಾರು ವಾಹನಗಳ ಶಾಖೆ.
3) ಆಂತರಿಕ ಆರ್ಥಿಕ ಸಲಹೆಗಾರರು.
4) ಕಾನೂನು ಕೋಶ–ಇವುಗಳ ಮೂಲಕ ನಡೆಸಲಾಗುತ್ತದೆ.

ಸಾರಿಗೆ ಸಚಿವಾಲಯದ ಅಧೀನದಲ್ಲಿ, ಸಾರಿಗೆ ಇಲಾಖೆ, ಆಯುಕ್ತರ ಕಛೇರಿ ಮತ್ತು ನಾಲ್ಕು ರಾಜ್ಯ ಸಾರಿಗೆ ಉದ್ದಿಮೆಗಳಾದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ಡಿ.ದೇವರಾಜ್ ಅರಸ್ ಟ್ರಕ್ ಟರ್ಮಿನಲ್ ಲಿ., (ಡಿಡಿಯುಟಿಟಿಎಲ್) ಎಂದು ಕರೆಯಲಾಗುವ ಒಂದು ಟ್ರಕ್ ಟರ್ಮಿನಲ್ ಅನ್ನು ಹೊಂದಿದೆ.

ಸಾರಿಗೆ ಸಚಿವಾಲಯವು ಸಾರಿಗೆ ವಿಷಯ ಮಾರ್ಗಸೂಚಿಗಳಿಗೆ ಸಂಬಂಧಿಸಿದ ಸೂಚನೆ ಮುಂತಾದವುಗಳನ್ನು ಹೊರಡಿಸುತ್ತದೆ.

ಸಾರ್ವಜನಿಕ ಉದ್ದೇಶವನ್ನು ಹೊಂದಿರುವ ಸರ್ಕಾರಿ ನೀತಿಗಳು, ಧ್ಯೇಯೋದ್ದೇಶಗಳನ್ನು ಸಾರಿಗೆ ಸಚಿವಾಲಯದ ಮೂಲಕ ನಿರ್ವಹಿಸಲಾಗುತ್ತದೆ ಮತ್ತು ಅವುಗಳನ್ನು ಸಾರಿಗೆ ಇಲಾಖೆಯ ಮೂಲಕ ಹಾಗೂ ಐದು ರಾಜ್ಯ ಸಾರಿಗೆ ಉದ್ದಿಮೆಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತದೆ.

ಸಾರಿಗೆ ಇಲಾಖೆಯು ಅನುಷ್ಠಾನಗೊಳಿಸಬೇಕಾದ ಹೊಸ ಯೋಜನಾ ಕಾರ್ಯಕ್ರಮಗಳಿಗೆ ಸಾರಿಗೆ ಇಲಾಖೆಯಲ್ಲಿ ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದು ಅನುಷ್ಠಾನಗೊಳಿಸಲಾಗುವುದು.

ಸಾರಿಗೆ ಸಚಿವಾಲಯದಲ್ಲಿನ ಪ್ರಕಾರ್ಯಗಳನ್ನು ಈ ಮುಂದಿನ ಅಧಿನಿಯಮಗಳು ಮತ್ತು ನಿಯಮಗಳಿಗೆ ಅನುಸಾರವಾಗಿ ಆಚರಣೆಗೆ ತರಲಾಗುತ್ತಿದೆ.:–

1) **ಕೇಂದ್ರ ಮೋಟಾರು ವಾಹನ ಅಧಿನಿಯಮ, 1988 ಮತ್ತು ನಿಯಮಗಳು**
2) **ಕರ್ನಾಟಕ ಮೋಟಾರು ವಾಹನ ನಿಯಮಗಳು, 1989.**
3) **ಕೇಂದ್ರ ಮೋಟಾರು ವಾಹನ ತೆರಿಗೆ ನಿರ್ಧರಣೆ, ಅಧಿನಿಯಮಗಳು, 1957.**
4) **ರಸ್ತೆ ಸಾರಿಗೆ ನಿಗಮ ಅಧಿನಿಯಮ, 1950.**
5) **ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961.**

ಸಾರಿಗೆ ಸಚಿವಾಲಯದ ಮೂಲಕ ಸರ್ಕಾರವು, ಮೇಲ್ಕಂಡ ಅಧಿನಿಯಮಗಳು ಮತ್ತು ನಿಯಮಗಳಲ್ಲಿರುವ ಚಲಾಯಿಸಬಹುದಾದ ಅಧಿಕಾರಗಳ ಪ್ರಕಾರ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

ಸಾರಿಗೆ ಆಯುಕ್ತರ ನಿಯೋಜಿತ ಅಧಿಕಾರಗಳನ್ನು ಚಲಾಯಿಸಲಿಕ್ಕಾಗದಿರುವಂತಹ ಮತ್ತು ಸಾರಿಗೆ ಆಯುಕ್ತರ ನಿಯೋಜಿತ ಅಧಿಕಾರಗಳನ್ನು ಮೀರಿರುವಂತಹ ನೌಕರರ ಮತ್ತು ಅಧಿಕಾರಿಗಳ ಸೇವಾ ವಿಷಯಗಳಿಗೆ ಸಂಬಂಧಿಸಿದ ಕಾರ್ಯವನ್ನು ಸಾರಿಗೆ ಸಚಿವಾಲಯದಲ್ಲಿ ನಿರ್ವಹಿಸಲಾಗುತ್ತದೆ.

ರಾಜ್ಯ ಸಾರಿಗೆ ಉದ್ದಿಮೆಗಳ ಪ್ರಕಾರ್ಯಗಳನ್ನು ರಸ್ತೆ ಸಾರಿಗೆ ಅಧಿನಿಯಮ, 1950 ಮತ್ತು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961 ರ ಅಡಿಯಲ್ಲಿ ನಿರ್ವಹಿಸಲಾಗುತ್ತದೆ. ಹಾಗೂ ಹಣಕಾಸಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಮತ್ತು ಸರ್ಕಾರವು ನಿರ್ವಹಿಸಬೇಕಾದ ಎಲ್ಲಾ ಪ್ರಕಾರ್ಯಗಳನ್ನು ರಸ್ತೆ ಸಾರಿಗೆ ನಿಗಮ ಅಧಿನಿಯಮ. 1950 ರ ಮತ್ತು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961 ರ ಅನುಸಾರ ಸಾರಿಗೆ ಸಚಿವಾಲಯದಲ್ಲಿ ನಿರ್ವಹಿಸಲಾಗುತ್ತಿದೆ.

ಸಾರಿಗೆ ಸಚಿವಾಲಯದ ಆಡಳಿತ ಮುಖ್ಯಸ್ಥರು ಪ್ರಧಾನ ಕಾರ್ಯದರ್ಶಿಯವರಾಗಿದ್ದು, ಇವರಿಗೆ ಶ್ರೇಣಿ–1 ರ (ಹಿರಿಯ ಶ್ರೇಣಿ) ದರ್ಜೆಯ ಮೂವರು ಅಧಿಕಾರಿಗಳು ಆಡಳಿತದಲ್ಲಿ ನೆರವು ನೀಡುತ್ತಾರೆ. ಆ ಅಧಿಕಾರಿಗಳೆಂದರೆ:

1) **ಉಪಕಾರ್ಯದರ್ಶಿ:** ಇವರು ಸಾರಿಗೆ ಇಲಾಖೆಯ ಸೇವಾ ವಿಷಯಗಳಿಗೆ ಮತ್ತು ಟೆಂಡರ್ ಬುಲೆಟಿನ್ನುಗಳಿಗೆ ಹಾಗೂ ಇತರ ಎಲ್ಲಾ ತತ್ಸಂಬಂಧಿತ ವಿಷಯಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ನೆರವು ನೀಡುತ್ತಾರೆ.
2) **ಉಪ ಕಾರ್ಯದರ್ಶಿ ಹಾಗೂ ಆಂತರಿಕ ಹಣಕಾಸು ಸಲಹೆಗಾರರು (ಐಎಫ್ಎ):** ಇವರು ಹಣಕಾಸು ವಿಷಯಗಳಲ್ಲಿ ನೆರವು ನೀಡುತ್ತಾರೆ.
3) **ಉಪ ಕಾರ್ಯದರ್ಶಿ ಹಾಗೂ ಕಾನೂನು ಕೋಶದ ಮುಖ್ಯಸ್ಥರು:** ಇವರುಗಳು ಕಾನೂನು ವಿಷಯಗಳಲ್ಲಿ ನೆರವು ನೀಡುತ್ತಾರೆ.

ಉಪಕಾರ್ಯದರ್ಶಿಯವರು, ತಮ್ಮ ಅಧೀನದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ಡಿ. ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್ ಲಿ., ಇವುಗಳ ವಿಷಯಗಳನ್ನು ನಿರ್ವಹಿಸುವ ಒಬ್ಬ ಅಧೀನ ಕಾರ್ಯದರ್ಶಿ (ಶ್ರೇಣಿ–1 ಕಿರಿಯ ಶ್ರೇಣಿ) ಹಾಗೂ ಸಾರಿಗೆ ಇಲಾಖೆಯ ವಿಷಯಗಳನ್ನು ನಿರ್ವಹಿಸುವ ಒಬ್ಬ ಪೀಠಾಧಿಕಾರಿ, ಇಬ್ಬರು ಶಾಖಾಧಿಕಾರಿಗಳು (ಶ್ರೇಣಿ–2) ಅವರನ್ನು ಹೊಂದಿದ್ದಾರೆ.

ಉಪಕಾರ್ಯದರ್ಶಿ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರಿಗೆ **i)** ಹಣಕಾಸು ವಿಷಯವಾಗಿ ಅಭಿಪ್ರಾಯವನ್ನು ನೀಡುವಲ್ಲಿ; ಮತ್ತು **ii)** ಆಯವ್ಯಯ ಮತ್ತು ಲೆಕ್ಕ ಪರಿಶೋಧನೆ ವಿಷಯಗಳಲ್ಲಿ ಇಬ್ಬರು ಶಾಖಾಧಿಕಾರಿಗಳು ನೆರವು ನೀಡುವರು.

ಕಾನೂನು ಕೋಶದ ಮುಖ್ಯಸ್ಥರು ಹಾಗೂ ಸರ್ಕಾರದ ಪದನಿಮಿತ್ತ ಉಪಕಾರ್ಯದರ್ಶಿಯವರಿಗೆ ಒಬ್ಬರು ಅಧೀನ ಕಾರ್ಯದರ್ಶಿಯವರು ನೆರವು ನೀಡುತ್ತಾರೆ.

## ಸಾರಿಗೆ ಇಲಾಖೆಯ ರಚನೆಯ ಚಾರ್ಟ್

## ಸರ್ಕಾರದ ಪ್ರಧಾನ ಕಾರ್ಯದರ್ಶಿ

## ಸಾರಿಗೆ ಇಲಾಖೆ

**ಸರ್ಕಾರದ ಉಪಕಾರ್ಯದರ್ಶಿ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು**

| | | | |
|---|---|---|---|
| **ಶಾಖಾಧಿಕಾರಿ(ಅಭಿಪ್ರಾಯ)** | **1** | **ಶಾಖಾಧಿಕಾರಿ(ಆಯವ್ಯಯ)** | **1** |
| **ಹಿರಿಯ ಸಹಾಯಕ** | **2** | **ಹಿರಿಯ ಸಹಾಯಕ** | **1** |
| **ಸಹಾಯಕ** | **1** | **ಸಹಾಯಕ** | **2** |
| **ಕಿರಿಯ ಸಹಾಯಕ** | **1** | **ಕಿರಿಯ ಸಹಾಯಕ** | **–** |
| **ಬೆರಳಚ್ಚುಗಾರ** | **1** | **ಬೆರಳಚ್ಚುಗಾರ** | **1** |
| **ಗ್ರೂಪ್ ಡಿ** | **1** | **ಗ್ರೂಪ್ ಡಿ** | **1** |

**ಸರ್ಕಾರದ ಉಪ ಕಾರ್ಯದರ್ಶಿ**

**ಸರ್ಕಾರದ ಅಧೀನ ಕಾರ್ಯದರ್ಶಿ**

| | | | | | |
|---|---|---|---|---|---|
| **ಶಾಖಾಧಿಕಾರಿ(ಸಾರಿಗೆ–1)** | **1** | **ಪೀಠಾಧಿಕಾರಿ(ಸಾರಿಗೆ–2)** | **1** | **ಶಾಖಾಧಿಕಾರಿ (ಸಮನ್ವಯ)** | **1** |
| **ಹಿರಿಯ ಸಹಾಯಕ** | **1** | **ಹಿರಿಯ ಸಹಾಯಕ** | **1** | **ಹಿರಿಯ ಸಹಾಯಕ** | **–** |
| **ಸಹಾಯಕ** | **2** | **ಸಹಾಯಕ** | **2** | **ಸಹಾಯಕ** | **1** |
| **ಕಿರಿಯ ಸಹಾಯಕ** | **–** | **ಕಿರಿಯ ಸಹಾಯಕ** | **1** | **ಕಿರಿಯ ಸಹಾಯಕ** | **2** |
| **ಬೆರಳಚ್ಚುಗಾರ** | **1** | **ಬೆರಳಚ್ಚುಗಾರ** | **1** | **ಬೆರಳಚ್ಚುಗಾರ** | **1** |
| **ಗ್ರೂಪ್ ಡಿ** | **1** | **ಗ್ರೂಪ್ ಡಿ** | **1** | **ಗ್ರೂಪ್ ಡಿ** | **2** |

**ಉಪ ಕಾರ್ಯದರ್ಶಿ ಹಾಗೂ ಕಾನೂನು ಕೋಶದ ಮುಖ್ಯಸ್ಥರು**

**ಅಧೀನ ಕಾರ್ಯದರ್ಶಿ**

| | |
|---|---|
| **ಶಾಖಾಧಿಕಾರಿ** | **1** |
| **ಹಿರಿಯ ಸಹಾಯಕ** | **–** |
| **ಸಹಾಯಕ** | **1** |
| **ಕಿರಿಯ ಸಹಾಯಕ** | **–** |
| **ಬೆರಳಚ್ಚುಗಾರ** | **1** |
| **ಗ್ರೂಪ್ ಡಿ** | **1** |

**(ii) ಸಾರಿಗೆ ಸಚಿವಾಲಯದ ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು :**

ಎ) **ಸರ್ಕಾರದ ಪ್ರಧಾನ ಕಾರ್ಯದರ್ಶಿ:** ಇವರು ಸಾರಿಗೆ ಸಚಿವಾಲಯ (ಸರ್ಕಾರ)ದ ಆಡಳಿತಾತ್ಮಕ ಮುಖ್ಯಸ್ಥರಾಗಿರುತ್ತಾರೆ. ಇವರು ಕರ್ನಾಟಕ ದಲ್ಲಿನ ಸಾರಿಗೆ ವಲಯದ ಎಲ್ಲಾ ವಿಷಯಗಳ ಸಂಬಂಧದಲ್ಲಿ, ವಿಶೇಷವಾಗಿ ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ), ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ಡಿ.ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್ ಲಿ., ವಿಷಯಗಳ ಸಂಬಂಧದಲ್ಲಿ ಪ್ರಭಾರ ಹೊಂದಿರುತ್ತಾರೆ. ಇವರು ಮಾನ್ಯ ಸಾರಿಗೆ ಸಚಿವರು ಅಥವಾ ಸರ್ಕಾರದ ನಿರ್ದೇಶನಗಳಿಗನುಗುಣವಾಗಿ ಮತ್ತು ಆದೇಶಗಳ ಮೇರೆಗೆ ಅಥವಾ ಸಂದರ್ಭಾನುಸಾರ ಸಾಮಾನ್ಯ ಕ್ರಮದಲ್ಲಿ ಕಾರ್ಯನಿರ್ವಹಿಸುತ್ತಾರೆ. ಇವರು ತಮ್ಮ ಅಡಿಯಲ್ಲಿ ಬರುವ ಸಾರಿಗೆ ಇಲಾಖೆ ಮತ್ತು ನಾಲ್ಕು ರಾಜ್ಯ ಸಾರಿಗೆ ಉದ್ಯಮಗಳು ಮತ್ತು ಡಿ.ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್ ಲಿ., ಇವುಗಳಲ್ಲಿ ನಿರ್ವಹಿಸಲಾಗುತ್ತಿರುವ ಕೆಲಸದ ಸಮಗ್ರ ಪ್ರಭಾರವನ್ನು ಹೊಂದಿರುತ್ತಾರೆ. ಇವರು ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಮತ್ತು ಪ್ರಕರಣಗಳನ್ನು ವಿಲೇ ಮಾಡುವಲ್ಲಿ ಸಂದರ್ಭಾನುಸಾರ, ಮಾನ್ಯ ಸಾರಿಗೆ ಸಚಿವರು ಅಥವಾ ಸರ್ಕಾರಕ್ಕೆ ನೆರವು ನೀಡುತ್ತಾರೆ ಮತ್ತು ಸಲಹೆ ಕೊಡುತ್ತಾರೆ.

ಬಿ) **ಸರ್ಕಾರದ ಉಪ ಕಾರ್ಯದರ್ಶಿ:** ಇವರು ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ)ಗೆ ಸಂಬಂಧಪಟ್ಟ ವಿಷಯಗಳ ಕುರಿತಾಗಿ ಕಾರ್ಯ ನಿರ್ವಹಿಸುವಲ್ಲಿ ಕಾರ್ಯದರ್ಶಿಗೆ ನೆರವಾಗುತ್ತಾರೆ ಮತ್ತು ಸಾರಿಗೆ ಸಚಿವಾಲಯದ ಸಮಗ್ರ ಉಸ್ತುವಾರಿ ನೋಡಿಕೊಳ್ಳುತ್ತಾರೆ.

ಸಿ) **ಉಪ ಕಾರ್ಯದರ್ಶಿ ಮತ್ತು ಆಂತರಿಕ ಹಣಕಾಸು ಸಲಹೆಗಾರರು:** ಇವರು ಹಣಕಾಸು ಸಂಬಂಧಿತ ವಿಷಯಗಳಲ್ಲಿ ಕಾರ್ಯದರ್ಶಿಗೆ ಸಲಹೆ ನೀಡುತ್ತಾರೆ. ಇವರು ಸಾರಿಗೆ ಇಲಾಖೆಯ ಬಜೆಟ್ ಸಿದ್ದಪಡಿಸುತ್ತಾರೆ. ಸಾರಿಗೆ ಇಲಾಖೆ ಮತ್ತು ಸಾರಿಗೆ ಇಲಾಖೆಯ ಅಧೀನದಲ್ಲಿ ಬರುವ 5 ಸಂಸ್ಥೆಗಳ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರಗಳ ವಿಷಯಗಳಲ್ಲಿ ಇವರು ಹೊಣೆಗಾರರಾಗಿರುತ್ತಾರೆ.

ಡಿ) **ಉಪಕಾರ್ಯದರ್ಶಿ ಮತ್ತು ಕಾನೂನು ಕೋಶದ ಮುಖ್ಯಸ್ಥ:** ಇವರು ಕಾನೂನು ಸಂಬಂಧಿತ ವಿಷಯಗಳಲ್ಲಿ ಕಾರ್ಯದರ್ಶಿಗೆ ಸಲಹೆ ನೀಡುತ್ತಾರೆ.

ಇ) **ಸರ್ಕಾರದ ಅಧೀನ ಕಾರ್ಯದರ್ಶಿ:** ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ), ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ಡಿ.ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್ ಲಿ., ಇವುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಉಪ ಕಾರ್ಯದರ್ಶಿಗೆ ನೆರವಾಗುತ್ತಾರೆ ಮತ್ತು ಕಡತಗಳನ್ನು ಸಲ್ಲಿಸುತ್ತಾರೆ. ಇವರು ಸಾಮಾನ್ಯವಾಗಿ ಪ್ರಧಾನ ಕಾರ್ಯದರ್ಶಿಯವರ ಮತ್ತು ಉಪ ಕಾರ್ಯದರ್ಶಿಯವರ ಆದೇಶಗಳನ್ವಯ ಕಾರ್ಯನಿರ್ವಹಿಸುತ್ತಾರೆ. ಇವರು ಕಡತಗಳಲ್ಲಿರುವ ಆದೇಶಗಳ ಪ್ರಕಾರ ಪತ್ರಗಳು, ಸುತ್ತೋಲೆಗಳು, ಸರ್ಕಾರಿ ಆದೇಶಗಳು ಮುಂತಾದವುಗಳನ್ನು ಹೊರಡಿಸುತ್ತಾರೆ. ಇವರು ತಮಗೆ ವಹಿಸಿದ ಕಾರ್ಯವನ್ನು ಕಾನೂನಿನ ಅನುಸಾರ ನಿರ್ವಹಿಸಲು ಜವಾಬ್ದಾರರಾಗಿರುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಲಾದಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಇವರು, ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕಾರ ರಾಜ್ಯ ಸಾರ್ವಜನಿಕ ಮಾಹಿತಿಯ ಮೊದಲ ಮೇಲ್ಮನವಿ ಪ್ರಾಧಿಕಾರವೂ ಸಹ ಆಗಿರುತ್ತಾರೆ.

**ಎಫ್) ಅಧೀನ ಕಾರ್ಯದರ್ಶಿ(ಕಾನೂನು ಕೋಶ):** ಇವರು ಕಾನೂನು ವಿಷಯಗಳಿಗೆ, ನ್ಯಾಯಾಲಯದ ವಿಷಯಗಳಿಗೆ ಸಂಬಂಧಪಟ್ಟಂತೆ ಸಾರಿಗೆ ಇಲಾಖೆಯ ಕಡತಗಳನ್ನು ಸಿದ್ದಪಡಿಸಿ ಮಂಡಿಸುವಲ್ಲಿ ಕಾನೂನು ಕೋಶದ ಮುಖ್ಯಸ್ಥರಿಗೆ ನೆರವಾಗುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಲಾದಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

ಜಿ) **ಶಾಖಾಧಿಕಾರಿಗಳು:**

**(i) ಪೀಠಾಧಿಕಾರಿ (ಮೋಟಾರು ವಾಹನಗಳ ಶಾಖೆ):** ಇವರು ಶಾಖೆಯ ಪ್ರಭಾರದಲ್ಲಿರುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ಗೊತ್ತುಪಡಿಸಿದ ಕಾರ್ಯವಿಧಾನದ ಪ್ರಕಾರ ವಿಷಯ ನಿರ್ವಾಹಕರು ಸಲ್ಲಿಸಿದ ಕಡತಗಳು/ಪತ್ರಗಳನ್ನು ಪರಿಶೀಲಿಸುತ್ತಾರೆ. ಇವರು ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ)ಗೆ ಸಂಬಂಧಪಟ್ಟ ವಿಷಯಗಳಲ್ಲಿ ಮತ್ತು ಇತರ ಸಾರಿಗೆ ವಿಷಯಗಳಲ್ಲಿ ಅಧೀನ ಕಾರ್ಯದರ್ಶಿಗೆ ನೆರವಾಗುತ್ತಾರೆ ಮತ್ತು ಕಡತಗಳನ್ನು ಸಲ್ಲಿಸುತ್ತಾರೆ. ಇವರು ಸಿ ಮತ್ತು ಡಿ ವರ್ಗಗಳಿಗೆ ಸಂಬಂಧಿಸಿದಂತೆ ಕಡತಗಳಲ್ಲಿರುವ ಆದೇಶಗಳ ಪ್ರಕಾರ ಪತ್ರಗಳು, ಸುತ್ತೋಲೆಗಳು, ಸರ್ಕಾರಿ ಆದೇಶಗಳು ಮುಂತಾದವುಗಳನ್ನು ಹೊರಡಿಸುತ್ತಾರೆ. ಇವರು ತಮಗೆ ವಹಿಸಿದ ಕಾರ್ಯವನ್ನು ಕಾನೂನಿನ ಅನುಸಾರ ನಿರ್ವಹಿಸಲು ಜವಾಬ್ದಾರರಾಗಿರುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಲಾದಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಇವರು ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕಾರ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯೂ ಸಹ ಆಗಿರುತ್ತಾರೆ.

**(ii) ಶಾಖಾಧಿಕಾರಿ (ರಾಜ್ಯ ಸಾರಿಗೆ ಉದ್ಯಮಗಳ ಶಾಖೆ):** ಇವರು ಸದರಿ ಶಾಖೆಯ ಪ್ರಭಾರದಲ್ಲಿರುತ್ತಾರೆ. ಇವರು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ಡಿ. ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್ ಲಿ., ಇವುಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸುತ್ತಾರೆ. ಇವರು ವಿಷಯ ನಿರ್ವಾಹಕರು ಸಲ್ಲಿಸುವ ಕಡತಗಳನ್ನು ಪರಿಶೀಲಿಸಿ ಅಧೀನ ಕಾರ್ಯದರ್ಶಿಗಳಿಗೆ ಸಲ್ಲಿಸುತ್ತಾರೆ. ಇವರು ಕರ್ನಾಟಕ ಸಚಿವಾಲಯದ ಕೈಪಿಡಿಯಲ್ಲಿ ನಮೂದಿಸಿರುವಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕಾರ ಇವರು ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯು ಸಹ ಆಗಿರುತ್ತಾರೆ.

**(iii) ಶಾಖಾಧಿಕಾರಿ, ಸ್ವೀಕೃತಿಗಳು, ರವಾನೆ ಮತ್ತು ಸಮನ್ವಯ:** ಇವರು ಶಾಖೆಯ ಪ್ರಭಾರದಲ್ಲಿರುತ್ತಾರೆ. ಇವರು ಸ್ವೀಕೃತಿಗಳು, ಪ್ರಕಟಣೆಗಳು ಮತ್ತು ಸಮನ್ವಯಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ನಿರ್ವಹಿಸುತ್ತಾರೆ. ಸಾರಿಗೆ ಸಚಿವಾಲಯಕ್ಕೆ ಸಂಬಂಧಪಟ್ಟ ವಿವಿಧ ಸಭೆಗಳನ್ನು ನಡೆಸುವಲ್ಲಿ ಉಪ ಕಾರ್ಯದರ್ಶಿ ಮತ್ತು ಅಧೀನ ಕಾರ್ಯದರ್ಶಿಗೆ ಇವರು ನೆರವು ನೀಡುತ್ತಾರೆ. ಇವರು ಒಂದಕ್ಕಿಂತ ಹೆಚ್ಚಿನ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಸಹ ನಿರ್ವಹಿಸುತ್ತಾರೆ. ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕಾರ ಇವರು ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯು ಸಹ ಆಗಿರುತ್ತಾರೆ.

**(iv) ಶಾಖಾಧಿಕಾರಿ (ಆಂತರಿಕ ಹಣಕಾಸು ಸಲಹೆ, ಅಭಿಪ್ರಾಯ):** ಇವರು ಅಧೀನ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ಅಥವಾ ಕಾರ್ಯದರ್ಶಿಗಳು ಆಂತರಿಕ ಹಣಕಾಸು ಸಲಹೆಗಾರರಿಗೆ ಕಳುಹಿಸಿದ ಹಣಕಾಸಿನ ವಿಷಯಗಳಿಗೆ ಸಂಬಂಧಪಟ್ಟಂತೆ ಸಾರಿಗೆ ವಿಭಾಗದ ಪ್ರಕರಣಗಳನ್ನು ಪರಿಶೀಲಿಸುವಲ್ಲಿ ಮತ್ತು ಸಿದ್ದಪಡಿಸಿ ಒಪ್ಪಿಸುವಲ್ಲಿ ಆಂತರಿಕ ಹಣಕಾಸು ಸಲಹೆಗಾರರಿಗೆ ನೆರವು ನೀಡುತ್ತಾರೆ. ಇವರು ಅಸ್ತಿತ್ವದಲ್ಲಿರುವ

ನಿಯಮಗಳು/ಕಾನೂನುಗಳಿಗೆ ಸಂಬಂಧಪಟ್ಟಂತೆ ಮತ್ತು ಹಣಕಾಸು ವಿಷಯಗಳಿಗೆ ಸಂಬಂಧಪಟ್ಟಂತೆ ಪ್ರಕರಣಗಳನ್ನು ಪರಿಶೀಲಿಸಿ ಕಡತಗಳನ್ನು ಆಂತರಿಕ ಹಣಕಾಸು ಸಲಹೆಗಾರರಿಗೆ ಸಲ್ಲಿಸುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಿರುವಂತೆ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**(v) ಶಾಖಾಧಿಕಾರಿ (ಆಂತರಿಕ ಹಣಕಾಸು ಸಲಹೆ, ಬಜೆಟ್):** ಇವರು ಸಾರಿಗೆ ಇಲಾಖೆಯ ಬಜೆಟ್ ಅನ್ನು ಸಿದ್ದಪಡಿಸುವಲ್ಲಿ ಆಂತರಿಕ ಹಣಕಾಸು ಸಲಹೆಗಾರರಿಗೆ ನೆರವು ನೀಡುತ್ತಾರೆ. ಇವರು ಸಾರಿಗೆ ಸಚಿವಾಲಯದ ಅಡಿಯಲ್ಲಿ ಬರುವ ಎಲ್ಲಾ ಘಟಕಗಳ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ ವಿಷಯಗಳಿಗೆ ಸಂಬಂಧಪಟ್ಟಂತೆಯೂ ಸಹ ಆಂತರಿಕ ಹಣಕಾಸು ಸಲಹೆಗಾರರಿಗೆ ನೆರವು ನೀಡುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಿರುವಂತೆ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**ಹೆಚ್) ವಿಷಯ ನಿರ್ವಾಹಕರು:** ಮೋಟಾರು ವಾಹನಗಳ ಶಾಖೆಯಲ್ಲಿ ಒಬ್ಬ ಹಿರಿಯ ಸಹಾಯಕ ಹಾಗೂ ಇಬ್ಬರು ಸಹಾಯಕ ಇರುತ್ತಾರೆ. ರಾಜ್ಯ ಸಾರಿಗೆ ನಿಗಮದ ಶಾಖೆಯಲ್ಲಿ ಒಬ್ಬ ಹಿರಿಯ ಸಹಾಯಕ ಹಾಗೂ ಇಬ್ಬರು ಸಹಾಯಕರು ಇರುತ್ತಾರೆ. ಶಾಖಾಧಿಕಾರಿ, ಸ್ವೀಕೃತಿ ರವಾನೆ ಶಾಖೆಗೆ ಒಬ್ಬ ಸಹಾಯಕ, ಇಬ್ಬರು ಕಿರಿಯ ಸಹಾಯಕರು ಇರುತ್ತಾರೆ. ಒಬ್ಬ ಸಹಾಯಕ ಹಾಗೂ ಒಬ್ಬ ಕಿರಿಯ ಸಹಾಯಕ ಹುದ್ದೆಯು ಖಾಲಿ ಇರುತ್ತದೆ. ಆಂತರಿಕ ಹಣಕಾಸು ಸಲಹೆಗಾರರು, ಅಭಿಪ್ರಾಯ ಇವರಿಗೆ ಇಬ್ಬರು ಹಿರಿಯ ಸಹಾಯಕರು ಹಾಗೂ ಒಬ್ಬ ಸಹಾಯಕರು ಇರುತ್ತಾರೆ ಹಾಗೂ ಆಂತರಿಕ ಹಣಕಾಸು ಸಲಹೆಗಾರರು, ಬಜೆಟ್ ಇವರಿಗೆ ಒಬ್ಬ ಹಿರಿಯ ಸಹಾಯಕ ಮತ್ತು ಇಬ್ಬರು ಸಹಾಯಕರು ಇರುತ್ತಾರೆ. ಅವರು ತಮಗೆ ವಹಿಸಿದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಅವರು ಜಾರಿಯಲ್ಲಿರುವ ನಿಯಮಗಳು/ಅಧಿನಿಯಮಗಳು ಮತ್ತು ಕಾನೂನು ಇತ್ಯಾದಿಗಳ ಪ್ರಕಾರ ಪ್ರಸ್ತಾವನೆಗಳನ್ನು/ಸ್ವೀಕೃತಿಗಳನ್ನು ಪರಿಶೀಲಿಸಿ, ಕರ್ನಾಟಕ ಸಚಿವಾಲಯ ಕೈಪಿಡಿಯ ಪ್ರಕಾರ ಕಡತಗಳಲ್ಲಿ ಟಿಪ್ಪಣಿಗಳನ್ನು ಬರೆದು, ಅವುಗಳನ್ನು ಶಾಖಾಧಿಕಾರಿಗೆ ಸಲ್ಲಿಸುತ್ತಾರೆ. ಅವರು ಆದೇಶಗಳ ಪ್ರಕಾರ ಕಡತದಲ್ಲಿ ಕರಡುಗಳನ್ನು ಸಹ ಸಿದ್ದಪಡಿಸಿ ಒಪ್ಪಿಸುತ್ತಾರೆ. ಹಿರಿಯ ಸಹಾಯಕ ಮೋಟಾರು ವಾಹನ ಶಾಖೆ ಮತ್ತು ಹಿರಿಯ ಸಹಾಯಕ ರಾಜ್ಯ ಸಾರಿಗೆ ನಿಗಮದ ಶಾಖೆ ಇವರುಗಳು ಮಾಹಿತಿ ಹಕ್ಕು ಅಧಿನಿಯಮ 2005ರ ಅನ್ವಯ ರಾಜ್ಯ ಸಹಾಯಕ ಮಾಹಿತಿ ಅಧಿಕಾರಿಯಾಗಿಯೂ ಕರ್ತವ್ಯ ನಿರ್ವಹಿಸುತ್ತಾರೆ.

**ಐ) ಕಿರಿಯ ಸಹಾಯಕ:** ಪ್ರತಿಯೊಂದು ಶಾಖೆಗೂ ಅಂದರೆ ಮೋಟಾರು ವಾಹನ ಶಾಖೆಗೆ ಮತ್ತು ರಾಜ್ಯ ಸಾರಿಗೆ ಉದ್ಯಮಗಳ ಶಾಖೆಗೆ ಒಬ್ಬ ಕಿರಿಯ ಸಹಾಯಕರಿರುತ್ತಾರೆ. ಉಪಕಾರ್ಯದರ್ಶಿ, ಕಾರ್ಯದರ್ಶಿ, ಇವರಿಗೂ ಸಹ ಕಿರಿಯ ಸಹಾಯಕರು ಇರುತ್ತಾರೆ. ಅವರು ಪ್ರತಿ ದಿನವು ಶಾಖೆಗೆ ಬರುವ ಟಪಾಲುಗಳನ್ನು ಮತ್ತು ಕಡತಗಳನ್ನು ಸ್ವೀಕರಿಸಿ ಅವುಗಳನ್ನು ವಿಷಯ ನಿರ್ವಾಹಕರಿಗೆ ವಿತರಣೆ ಮಾಡುತ್ತಾರೆ, ಕಡತಗಳ ಚಲನವಲನವನ್ನು ನಿರ್ವಹಿಸುತ್ತಾರೆ. ಪತ್ರ ಮೊದಲಾದವುಗಳನ್ನು ಹೊರಡಿಸುವುದಕ್ಕಾಗಿ ಜವಾಬ್ದಾರರಾಗಿರುತ್ತಾರೆ. ಅವರು ಕರ್ನಾಟಕ ಸಚಿವಾಲಯ ಕೈಪಿಡಿ ಪ್ರಕಾರ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**ಜೆ) ಶೀಘ್ರಲಿಪಿಗಾರರು:** ಅಧೀನ ಕಾರ್ಯದರ್ಶಿ, ಉಪಕಾರ್ಯದರ್ಶಿ ಮತ್ತು ಕಾರ್ಯದರ್ಶಿಯವರಿಗೆ ಶೀಘ್ರಲಿಪಿಗಾರರು ಇರುತ್ತಾರೆ. ಅವರು ಅಧಿಕಾರಿಗಳು ನೀಡಿರುವ ಉಕ್ತಲೇಖನವನ್ನು ಬೆರಳಚ್ಚು ಮಾಡುತ್ತಾರೆ ಮತ್ತು ಅಧಿಕಾರಿಗಳ ನಿರ್ದೇಶನಗಳ ಪ್ರಕಾರ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಕಾರ್ಯದರ್ಶಿಗಳಿಗೆ ಸಂಬಂಧಪಟ್ಟ ಶೀಘ್ರಲಿಪಿಗಾರರು/ಆಪ್ತ ಸಿಬ್ಬಂದಿ ವರ್ಗದವರು ಸಾರಿಗೆ ಇಲಾಖೆಯ ಪ್ರಥಮ ಶ್ರೇಣಿಯ ಅಧಿಕಾರಿಗಳ ಎಪಿಆರ್‌ಗಳಿಗೆ ಸಂಬಂಧಪಟ್ಟ ಕೆಲಸ ಕಾರ್ಯಗಳನ್ನು ಸಹ ನಿರ್ವಹಿಸುತ್ತಾರೆ. ಅವರು ಕರ್ನಾಟಕ ಸಚಿವಾಲಯ ಕೈಪಿಡಿಯ ಪ್ರಕಾರ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**ಕೆ) ಬೆರಳಚ್ಚುಗಾರರು:** ಶಾಖೆಗಳಿಗೆ ಸಂಬಂಧಪಟ್ಟಂತೆ ಬೆರಳಚ್ಚುಗಾರರು ಇರುತ್ತಾರೆ. ಅವರು ಶಾಖೆಯಲ್ಲಿನ ಬೆರಳಚ್ಚು ಕಾರ್ಯವನ್ನು ನಿರ್ವಹಿಸುತ್ತಾರೆ.

**ಎಲ್) ದಲಾಯಿತರು (ಶ್ರೇಣಿ–4):** ದಲಾಯಿತರು ಕಛೇರಿಯನ್ನು ಅಚ್ಚುಕಟ್ಟಾಗಿ ಮತ್ತು ಚೊಕ್ಕಟವಾಗಿರುತ್ತಾರೆ. ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿರುವ ಸೂಚನೆಗಳ ಪ್ರಕಾರ ಅವರು ಇತರ ಶಾಖೆಗಳಿಗೆ / ಇಲಾಖೆಗಳಿಗೆ ಕಡತಗಳನ್ನು / ಟಪಾಲುಗಳನ್ನು ತಲುಪಿಸುತ್ತಾರೆ. ಮುಕ್ತಾಯ ಮಾಡಲಾದ ಕಡತಗಳನ್ನು ಒಟ್ಟಿಗೆ ಸೇರಿಸಿ ಹೊಲಿದು, ಅವುಗಳನ್ನು ಸಾಮಾನ್ಯ ದಾಖಲೆ ಶಾಖೆಗೆ ತಲುಪಿಸುತ್ತಾರೆ.

**(iii) ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆ ಹಂತಗಳೂ ಸೇರಿದಂತೆ ತೀರ್ಮಾನವನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ:**

**ಎ) ತೀರ್ಮಾನವನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಲಾಗುವಂತಹ ಕಾರ್ಯವಿಧಾನವು ಹೀಗಿದೆ.**

**ವಿಷಯ ನಿರ್ವಾಹಕ:** ಇವರು ಪ್ರಸ್ತಾವನೆಯನ್ನು ಸ್ವೀಕರಿಸಿದ ನಂತರ ಹೊಸ ಕಡತವನ್ನು ತೆರೆಯುತ್ತಾರೆ ಅಥವಾ ಈಗಾಗಲೇ ಇರುವ ಕಡತದಲ್ಲಿನ ಪತ್ರಗಳ ಮಾಹಿತಿಯನ್ನು ಪರಿಶೀಲಿಸುತ್ತಾರೆ.

**ಶಾಖಾಧಿಕಾರಿ:** ಇವರು ಪ್ರಸ್ತಾವನೆಗೆ ಸಂಬಂಧಪಟ್ಟ ಎಲ್ಲಾ ಅಂಶಗಳನ್ನು ಪರಿಶೀಲಿಸುತ್ತಾರೆ ಮತ್ತು ಕೈಗೊಳ್ಳಬೇಕಾದ ಮುಂದಿನ ಕ್ರಮಕ್ಕಾಗಿ ಕಡತವನ್ನು ಅಧೀನ ಕಾರ್ಯದರ್ಶಿಗಳಿಗೆ ಗುರುತು ಮಾಡಿ ಕಳುಹಿಸುತ್ತಾರೆ.

**ಅಧೀನ ಕಾರ್ಯದರ್ಶಿ:** ಇವರು ಪ್ರಸ್ತಾವನೆ ಕುರಿತು ಸೂಕ್ತ ಕ್ರಮವನ್ನು ಸೂಚಿಸುತ್ತಾರೆ ಮತ್ತು ಇರುವಂತಹ ನಿಯಮಗಳು ಅಥವಾ ಅಧಿನಿಯಮಗಳ ಉಪಬಂಧಗಳು, ಪೂರ್ವ ನಿದರ್ಶನ ಪ್ರಕರಣಗಳ ಹಿನ್ನಲೆಯಲ್ಲಿ ಅದರ ಅರ್ಥವನ್ನು ವಿವರಿಸುತ್ತಾರೆ ಅಥವಾ ನಿಯೋಜಿತವಾದ ಅಧಿಕಾರಗಳ ಮೇರೆಗೆ ಸರಿಯಾದ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ.

**ಉಪಕಾರ್ಯದರ್ಶಿ:** ಇವರು ಪ್ರಕರಣವನ್ನು ಸಮಗ್ರ ದೃಷ್ಟಿಯಲ್ಲಿ ಪರಿಶೀಲಿಸಿ, ಪರಿಶೀಲನೆಯಲ್ಲಿರುವಂತಹ ಪ್ರಸ್ತಾವನೆಗೆ ಸಂಬಂಧಪಟ್ಟಂತೆ ಅಳವಡಿಸಿಕೊಳ್ಳಬೇಕಾದ ಅಂತಿಮ ಕ್ರಮದ ಅನುಮೋದನೆಗಾಗಿ ಪ್ರಧಾನ ಕಾರ್ಯದರ್ಶಿಗಳಿಗೆ ಕಡತವನ್ನು ಸಲ್ಲಿಸುತ್ತಾರೆ ಅಥವಾ ನಿಯೋಜಿತವಾದ ಅಧಿಕಾರಗಳ ಮೇರೆಗೆ ಸರಿಯಾದ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ.

**ಪ್ರಧಾನ ಕಾರ್ಯದರ್ಶಿ:** ಇವರು ನಿಯೋಜಿತ ಅಧಿಕಾರಿಗಳ ಮೇರೆಗೆ ಪ್ರಸ್ತಾವನೆ ಕುರಿತಂತೆ ತೆಗೆದುಕೊಳ್ಳಬಹುದಾದ ಕ್ರಮದ ಬಗ್ಗೆ ನಿರ್ಣಯವನ್ನು ತೆಗೆದುಕೊಳ್ಳುತ್ತಾರೆ ಮತ್ತು ಅಗತ್ಯವಾದರೆ, ಸಂದರ್ಭಾನುಸಾರ, ಸಾರಿಗೆ ಇಲಾಖೆಯ ಮಾನ್ಯ ಸಚಿವರಿಗೆ ಅಥವಾ ಸರ್ಕಾರಕ್ಕೆ ಅಂತಿಮ ಆದೇಶಗಳಿಗಾಗಿ ಕಡತವನ್ನು ಸಲ್ಲಿಸಿರುತ್ತಾರೆ.

**(ಬಿ) ಮೇಲ್ವಿಚಾರಣೆಯ ಹಂತಗಳು:–**

**ಮೋಟಾರು ವಾಹನಗಳ ಶಾಖೆ:**

ವಿಷಯ ನಿರ್ವಾಹಕ→ ಪೀಠಾಧಿಕಾರಿ → ಉಪಕಾರ್ಯದರ್ಶಿ → ಪ್ರಧಾನ ಕಾರ್ಯದರ್ಶಿ

**ರಾಜ್ಯ ಸಾರಿಗೆ ನಿಗಮ ಶಾಖೆ:**

ವಿಷಯ ನಿರ್ವಾಹಕ→ಶಾಖಾಧಿಕಾರಿ→ ಅಧೀನ ಕಾರ್ಯದರ್ಶಿ →ಉಪಕಾರ್ಯದರ್ಶಿ→ಪ್ರಧಾನ ಕಾರ್ಯದರ್ಶಿ

**ಸ್ವೀಕೃತಿ ರವಾನೆ ಮತ್ತು ಸಮನ್ವಯ ಶಾಖೆ**

ವಿಷಯ ನಿರ್ವಾಹಕ→ಶಾಖಾಧಿಕಾರಿ→ಅಧೀನ ಕಾರ್ಯದರ್ಶಿ→ ಉಪಕಾರ್ಯದರ್ಶಿ→ ಪ್ರಧಾನ ಕಾರ್ಯದರ್ಶಿ

**ಆಂತರಿಕ ಹಣಕಾಸು ಸಲಹೆಗಾರರು (ಅಭಿಪ್ರಾಯ) :**

ವಿಷಯ ನಿರ್ವಾಹಕ → ಶಾಖಾಧಿಕಾರಿ → ಆಂತರಿಕ ಹಣಕಾಸು ಸಲಹೆಗಾರರು → ಪ್ರಧಾನ ಕಾರ್ಯದರ್ಶಿ

**ಆಂತರಿಕ ಹಣಕಾಸು ಸಲಹೆಗಾರರು (ಬಜೆಟ್) :**

ವಿಷಯ ನಿರ್ವಾಹಕ → ಶಾಖಾಧಿಕಾರಿ → ಆಂತರಿಕ ಹಣಕಾಸು ಸಲಹೆಗಾರರು → ಪ್ರಧಾನ ಕಾರ್ಯದರ್ಶಿ

**ಕಾನೂನು ಕೋಶ:**

ವಿಷಯ ನಿರ್ವಾಹಕ →ಅಧೀನ ಕಾರ್ಯದರ್ಶಿ →ಕಾನೂನು ಕೋಶದ ಮುಖ್ಯಸ್ಥರು → ಪ್ರಧಾನ ಕಾರ್ಯದರ್ಶಿ

**(iv) ಪ್ರಕಾರ್ಯಗಳ ನಿರ್ವಹಣೆಗಾಗಿ ನಿರೂಪಿಸಲಾದ ಮಾದರಿಗಳು:**

**ದಲಾಯಿತ:** ಆತನು ತನಗೆ ವಹಿಸಿಕೊಡಲಾದ ಕೆಲಸಗಳನ್ನು ಆ ದಿನದಂದೇ ನಿರ್ವಹಿಸಬೇಕು.

**ಕಿರಿಯ ಸಹಾಯಕ:** ಆತನು ತನಗೆ ವಹಿಸಿಕೊಡಲಾದ ಕೆಲಸಗಳನ್ನು ಆ ದಿನದಂದೇ ನಿರ್ವಹಿಸಬೇಕು.

**ವಿಷಯ ನಿರ್ವಾಹಕರು:** (ಕರ್ನಾಟಕ ಸಚಿವಾಲಯ ಕೈಪಿಡಿ ಪ್ರಕಾರ) ಕಡತಗಳನ್ನು/ಟಪಾಲುಗಳನ್ನು 5 ದಿನಗಳವರೆಗೂ ಸಲ್ಲಿಸಬೇಕು.

| | |
|---|---|
| **ಶಾಖಾಧಿಕಾರಿ**<br>**ಅಧೀನ ಕಾರ್ಯದರ್ಶಿ**<br>**ಉಪಕಾರ್ಯದರ್ಶಿ**<br>**ಪ್ರಧಾನ ಕಾರ್ಯದರ್ಶಿ** | **ಆದ್ಯತೆಯ ಮೇಲೆ ಕೆಲಸವನ್ನು ನಿರ್ವಹಿಸಬೇಕು** |

**(v) ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ, ಹೊಂದಿರುವ ಅಥವಾ ಅದರ ನಿಯಂತ್ರಣದಲ್ಲಿರುವ ಅಥವಾ ನೌಕರರು ಬಳಸುವ ನಿಯಮಗಳು, ವಿನಿಯಮಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು:**

1. ಕೇಂದ್ರ ಮೋಟಾರು ವಾಹನಗಳ ಅಧಿನಿಯಮ, 1988.
2. ಕರ್ನಾಟಕ ಮೋಟಾರು ವಾಹನಗಳ ನಿಯಮಗಳು, 1989.
3. ಕರ್ನಾಟಕ ಮೋಟಾರು ವಾಹನಗಳ ತೆರಿಗೆ ನಿರ್ಧರಣೆ ಅಧಿನಿಯಮ, 1957.
4. ಕರ್ನಾಟಕ ಮೋಟಾರು ವಾಹನಗಳ ತೆರಿಗೆ ನಿರ್ಧರಣೆ ನಿಯಮಗಳು, 1957.
5. ರಸ್ತೆ ಸಾರಿಗೆ ನಿಗಮ ಅಧಿನಿಯಮ, 1950.
6. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961.
7. ಕರ್ನಾಟಕ ಸಿವಿಲ್ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1974.
8. ಇಲಾಖಾ ಬಡ್ತಿ ಸಮಿತಿಗಳು.
9. ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೌಕರಿ ಭರ್ತಿ) ನಿಯಮಗಳು, 1977.
10. ಕರ್ನಾಟಕ ಸಿವಿಲ್ ಸೇವಾ (ಪ್ರೊಬೆಷನ್) ನಿಯಮಗಳು, 1977.
11. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳ ಮೀಸಲಾತಿ ರೋಸ್ಟರ್.
12. ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು, 1994.
13. ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ವಿನಿಯಮ, 2000.
14. ಸೇವೆಯಲ್ಲಿರುವಾಗ ಮೃತರಾದ ಸರ್ಕಾರಿ ನೌಕರರ ಅವಲಂಬಿತರಿಗೆ ಅನುಕಂಪ ಆಧಾರದಲ್ಲಿ ನೇಮಕಾತಿ.
15. ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957.
16. ಕರ್ನಾಟಕ ಸಿವಿಲ್ ಸೇವಾ (ನಡವಳಿಕೆ) ನಿಯಮಗಳು, 1966.
17. ಕರ್ನಾಟಕ ಸರ್ಕಾರಿ (ವ್ಯವಹಾರ ಹಂಚಿಕೆ) ನಿಯಮಗಳು, 1977.

18. ಕರ್ನಾಟಕ ಕಾರ್ಯನಿರ್ವಹಣಾ ನಿಯಮಗಳು, 1977.
19. ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಚಿಕಿತ್ಸೆ) ನಿಯಮಗಳು, 1963.
20. ಕರ್ನಾಟಕ ಸಿವಿಲ್ ಸೇವಾ ನಿಯಮಗಳು.

**(vi) ಅದು ಹೊಂದಿರುವ ಅಥವಾ ಅದರ ನಿಯಂತ್ರದಲ್ಲಿರುವ ದಾಖಲೆಗಳ ಪ್ರವರ್ಗ:–**

ಸಾರಿಗೆ ಇಲಾಖೆ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ದೇವರಾಜ ಅರಸ್ ಟ್ರಕ್ ಟರ್ಮಿನಲ್ ಲಿ., – ಇವುಗಳಿಗೆ ಸಂಬಂಧಪಡುವ ಎಲ್ಲಾ ಕಡತಗಳನ್ನು ಸಾರಿಗೆ ಸಚಿವಾಲಯವು ನಿರ್ವಹಿಸುತ್ತದೆ ಮತ್ತು ಪರಿಷ್ಕರಿಸುತ್ತದೆ.

**(vii) ರಚನಾ ನೀತಿ ಅಥವಾ ಅದರ ಅನುಷ್ಠಾನದ ಸಂಬಂಧದಲ್ಲಿ ಸಾರ್ವಜನಿಕರೊಡನೆ ಸಮಾಲೋಚನೆ ನಡೆಸುವುದಕ್ಕಾಗಿ ಅಥವಾ ಅವರ ಪ್ರಾತಿನಿಧ್ಯಕ್ಕಾಗಿ ಮಾಡಲಾದ ಏರ್ಪಾಡುಗಳ ವಿವರಗಳು:**

ತೆಗೆದುಕೊಂಡ ಕಾರ್ಯನೀತಿ ನಿರ್ಧಾರಗಳು ಹಾಗೂ ಮಾಡಿರುವ ಅನುಷ್ಠಾನವು ಮೋಟಾರು ವಾಹನಗಳ ಅಧಿನಿಯಮ ಮತ್ತು ನಿಯಮಗಳಲ್ಲಿ ಒಳಗೊಂಡಿರುತ್ತದೆ. ಅಂಥ ಸಮಾಲೋಚನೆಗಾಗಿ ಅಧಿನಿಯಮ ಮತ್ತು ನಿಯಮಗಳಲ್ಲಿ ಉಪಬಂಧವನ್ನು ಕಲ್ಪಿಸಿದರೆ, ತದನುಸಾರವಾಗಿ ಕ್ರಮ ಕೈಗೊಳ್ಳಲಾಗುವುದು.

**(viii) ಸಲಹೆಯ ಉದ್ದೇಶಕ್ಕಾಗಿ ಮಂಡಳಿಗಳ, ಪರಿಷತ್ತುಗಳ, ಸಮಿತಿ ಇತ್ಯಾದಿಗಳ ವಿವರಣೆ:** ಸಾರಿಗೆ ಸಚಿವಾಲಯದಲ್ಲಿ ಅಂಥ ಯಾವುದೇ ಮಂಡಳಿಗಳು ಪರಿಷತ್ತುಗಳು ಅಥವಾ ಸಮಿತಿಗಳು ಇಲ್ಲ.

**(ix) ಅಧಿಕಾರಿಗಳು ಮತ್ತು ನೌಕರರ ನಿರ್ದೇಶಿಕೆ:–**

| ಕ್ರ ಸಂ. | ಪದನಾಮ | ಅಧಿಕಾರಿ/ನೌಕರರ ಹೆಸರು (ಶ್ರೀಯುತರು) | ದೂರವಾಣಿ ಸಂಖ್ಯೆ ಕಛೇರಿ/ಮನೆ | ಮೊಬೈಲ್ ನಂ | ಇ–ಮೇಲ್ ವಿಳಾಸ |
|---|---|---|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ | ಪಿ.ಎನ್.ಶ್ರೀನಿವಾಸಾಚಾರಿ | 080-22353912<br>**(R)**080-26486429 | 9448992055 | secretarytransport@gmail.com |
| 2 | ಶಾಖಾಧಿಕಾರಿ<br>ಪ್ರಧಾನ ಕಾರ್ಯದರ್ಶಿಯವರ<br>ಆಪ್ತ ಶಾಖೆ | ಶಾಂತಕುಮಾರ್ ಕೆ.ಎಂ | 080-22353912 | 9448684025 | shanthakumarkgs@gmail.com |
| 3 | ಶೀಘ್ರಲಿಪಿಗಾರರು<br>ಪ್ರಧಾನ ಕಾರ್ಯದರ್ಶಿಯವರ<br>ಆಪ್ತ ಶಾಖೆ | ಹೇಮಾಶ್ರೀ | 080-22353912 | 9036651962 | hemashree_85yahoo.co.in |
| 4 | ಶೀಘ್ರಲಿಪಿಗಾರ್ತಿ<br>ಪ್ರಧಾನ ಕಾರ್ಯದರ್ಶಿಯವರ<br>ಆಪ್ತ ಶಾಖೆ | ಮಹಾಜಬೀನ್ ಸೈ. ಮುಲ್ಲಾ | 080-22353912 | 9740250746 | meharkgs@gmail.com |
| 5 | ದಲಾಯಿತ್<br>ಪ್ರಧಾನ ಕಾರ್ಯದರ್ಶಿಯವರ<br>ಆಪ್ತ ಶಾಖೆ | ಬಿ.ಮೋಹನ್ ಸಿಂಗ್ | 080-22353912 | 9986362175 | |
| 6 | ಜಮೇದಾರ್<br>ಪ್ರಧಾನ ಕಾರ್ಯದರ್ಶಿಯವರ<br>ಆಪ್ತ ಶಾಖೆ | ಶಂಕರ್ ಎಂ.ಎಸ್ | 080-22353912 | 9901079081 | |
| 7 | ಸರ್ಕಾರದ ಉಪಕಾರ್ಯದರ್ಶಿ | ಎಂ.ಎನ್.ಶ್ರೀನಿವಾಸಮೂರ್ತಿ | 080-22353962<br>**(R)**080-23481021 | 9972109572 | |
| 8 | ಶೀಘ್ರಲಿಪಿಗಾರರು<br>ಉಪ ಕಾರ್ಯದರ್ಶಿಯವರ<br>ಆಪ್ತ ಶಾಖೆ | ಗಜಾನನ ಸುತಾರ್ | 080-22353962 | 8951565404 | gajananastr@yahoo.co.in |
| 9 | ಕಿರಿಯ ಸಹಾಯಕ (ಖಾಲಿ) | | | | |
| 10 | ಜಮೇದಾರ್ / ದಲಾಯತ್ (ಖಾಲಿ) | | | | |
| 11 | ಸರ್ಕಾರದ ಅಧೀನ ಕಾರ್ಯದರ್ಶಿ | ಕೆ.ಬೀರೇಶ್ | 080-22032292<br>**(R)** 7760992043 | 9845058774 | Undersecretarytransport<br>@gmail.com |
| 12 | ಶೀಘ್ರಲಿಪಿಗಾರರು (ಖಾಲಿ) | | | | |

| ಕ್ರ ಸಂ. | ಪದನಾಮ | ಅಧಿಕಾರಿ/ನೌಕರರ ಹೆಸರು (ಶ್ರೀಯುತರು) | ದೂರವಾಣಿ ಸಂಖ್ಯೆ ಕಛೇರಿ/ಮನೆ | ಮೊಬೈಲ್ ನಂ | ಇ–ಮೇಲ್ ವಿಳಾಸ |
|---|---|---|---|---|---|
| 13 | ಜಮೇದಾರ್<br>ಅಧೀನ ಕಾರ್ಯದರ್ಶಿಯವರ ಆಪ್ತ ಶಾಖೆ | ಶೋಭಾ ಎಸ್.ವಿ | 080-22032292<br>**(R)**080-26657108 | 9008317905 | |
| 14 | ಶಾಖಾಧಿಕಾರಿ<br>ಸಾರಿಗೆ–1 ಶಾಖೆ | ಎಂ.ದೇವರಾಜು | 080-22032914 | 9945434613 / 9740331593 | |
| 15 | ಹಿರಿಯ ಸಹಾಯಕ (ಖಾಲಿ) | | | | |
| 16 | ಸಹಾಯಕ | ಶಿವಕೇಶವ . ಪಿ | 080-22032914 | 9845233307 | |
| 17 | ಸಹಾಯಕ<br>ಸಾರಿಗೆ–1 ಶಾಖೆ | ಶಂಕರ ಗೌಡಿ | 080-22032914 | | |
| 18 | ಕಿರಿಯ ಸಹಾಯಕಿ | ಮೇರಿ ಸುಪ್ರಿಯ | 080-22032914 | 8197032323 | |
| 19 | ಬೆರಳಚ್ಚುಗಾರ್ತಿ<br>ಸಾರಿಗೆ–1 | ಆರ್.ದೀಪಾ | 080-22032914 | 8197355643 | |
| 20 | ದಲಾಯತ್ (ಖಾಲಿ) | | | | |
| 21 | ಪೀಠಾಧಿಕಾರಿ<br>ಸಾರಿಗೆ–2 ಶಾಖೆ | ಆರ್.ಪ್ರಭುಶಂಕರ್ | 080-22032014 | 9945800428 | |
| 22 | ಹಿರಿಯ ಸಹಾಯಕ<br>ಸಾರಿಗೆ–2 ಶಾಖೆ | ವೈ.ಜಿ.ಕಾಂತವೀರಯ್ಯ | 080-22032014 | 8105040430 | |
| 23 | ಸಹಾಯಕ<br>ಸಾರಿಗೆ–2 ಶಾಖೆ | ಪಿ. ಚಂದ್ರಕಾಂತ | 080-22032014 | 9945017003 | |
| 24 | ಸಹಾಯಕ<br>ಸಾರಿಗೆ–2 ಶಾಖೆ | ನಾರಾಯಣಸ್ವಾಮಿ.ಎಸ್ | 080-22032014 | 9611141598 | |
| 25 | ಬೆರಳಚ್ಚುಗಾರರು<br>ಸಾರಿಗೆ–2 ಶಾಖೆ | ಶ್ವೇತಾ | 080-22032014 | 9980697149 | |
| 26 | ದಲಾಯತ್/ ಗ್ರೂಪ್ ಡಿ (ಖಾಲಿ) | | | | |
| 27 | ಶಾಖಾಧಿಕಾರಿ<br>ಸಮನ್ವಯ ಶಾಖೆ | ವಸಂತಕುಮಾರ | 080-22032336 | 9448134607 | |
| 28 | ಸಹಾಯಕ (ಖಾಲಿ) | | | | |
| 29 | ಕಿರಿಯ ಸಹಾಯಕ<br>ಸಮನ್ವಯ ಶಾಖೆ | ಬಸವರೆಡ್ಡಿ ಕೊಪ್ಪದ | 080-22032336 | 11800+ ಇತರೆ ಭತ್ಯೆಗಳು | |
| 30 | ಕಿರಿಯ ಸಹಾಯಕ (ಖಾಲಿ) | | | | |
| 31 | ಜಮೇದಾರ್ / ದಲಾಯತ್ (ಖಾಲಿ) | | | | |
| 32 | ಜಮೇದಾರ್ / ದಲಾಯತ್ (ಖಾಲಿ) | | 080-22032014 | | |
| 33 | ಬೆರಳಚ್ಚುಗಾರ್ತಿ | ಪ್ರೇಮಕುಮಾರಿ | 080-22032292 | 9943384650 | |

**(x) ನಷ್ಟ ಪರಿಹಾರ ವ್ಯವಸ್ಥೆಯನ್ನು ಒಳಗೊಂಡಂತೆ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರರು ಪಡೆಯುತ್ತಿರುವ ಮಾಸಿಕ ವೇತನ :**

| ಕ್ರ. ಸಂ. | ಪದನಾಮ | ಒಟ್ಟು ವೇತನ ರೂ.ಗಳಲ್ಲಿ |
|---|---|---|
| 1 | ಪಿ.ಎನ್.ಶ್ರೀನಿವಾಸಾಚಾರಿ,<br>ಸರ್ಕಾರದ ಪ್ರಧಾನ ಕಾರ್ಯದರ್ಶಿ<br>ಸಾರಿಗೆ ಇಲಾಖೆ | 1,45,648/- |
| 2 | ಶಾಂತಕುಮಾರ್ ಕೆ.ಎಂ,<br>ಶಾಖಾಧಿಕಾರಿ<br>ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ | 45,755/- |

| ಕ್ರ. ಸಂ. | ಪದನಾಮ | ಒಟ್ಟು ವೇತನ ರೂ.ಗಳಲ್ಲಿ |
|---|---|---|
| 3 | ಹೇಮಶ್ರೀ ಬಿ.<br>ಶೀಘ್ರಲಿಪಿಗಾರ್ತಿ<br>ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ | 24,030/- |
| 4 | ಮಹಾಜಬೀನ್ ಸೈ. ಮುಲ್ಲಾ, ಶೀಘ್ರಲಿಪಿಗಾರ್ತಿ<br>ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ | 29,055/- |
| 5 | ಬಿ.ಮೋಹನ್ ಸಿಂಗ್, ದಲಾಯತ್<br>ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ | 30,475/- |
| 6 | ಶಂಕರ್ ಎಂ.ಎಸ್ , ಜಮೇದಾರ್<br>ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ | 28,300/- |
| 7 | ಎಂ.ಎನ್.ಶ್ರೀನಿವಾಸಮೂರ್ತಿ<br>ಸರ್ಕಾರದ ಉಪಕಾರ್ಯದರ್ಶಿ, ಸಾರಿಗೆ ಇಲಾಖೆ | 53,850/- |
| 8 | ಗಜಾನನ ಸುತಾರ್, ಶೀಘ್ರಲಿಪಿಗಾರರು<br>ಉಪ ಕಾರ್ಯದರ್ಶಿಯವರ ಆಪ್ತ ಶಾಖೆ | 22,855/- |
| 9 | ಕಿರಿಯ ಸಹಾಯಕ (ಖಾಲಿ) | ಖಾಲಿ |
| 10 | ಜಮೇದಾರ್ / ದಲಾಯತ್ (ಖಾಲಿ) | |
| 11 | ಕೆ.ಬೀರೇಶ್, ಸರ್ಕಾರದ ಅಧೀನ<br>ಕಾರ್ಯದರ್ಶಿ,<br>ಸಾರಿಗೆ ಇಲಾಖೆ | 44,480/- |
| 12 | ಶೀಘ್ರಲಿಪಿಗಾರರು (ಖಾಲಿ) | ಖಾಲಿ |
| 13 | ಶೋಭಾ ಎಸ್.ವಿ, ಜಮೇದಾರ್<br>ಅಧೀನ ಕಾರ್ಯದರ್ಶಿಯವರ ಆಪ್ತ ಶಾಖೆ | 23,370/- |
| 14 | ಎಂ.ದೇವರಾಜು, ಶಾಖಾಧಿಕಾರಿ<br>ಸಾರಿಗೆ-1 ಶಾಖೆ | 51,236/- |
| 15 | ಹಿರಿಯ ಸಹಾಯಕ (ಖಾಲಿ) | ಖಾಲಿ |
| 16 | ಶಂಕರ ಗೌಡಿ ಸಹಾಯಕ-1 | ---- |
| 17 | ಶಿವಕೇಶವ.ಪಿ ಸಹಾಯಕ | 24,810/- |
| 18 | ಮೇರಿ ಸುಪ್ರಿಯ<br>ಕಿರಿಯ ಸಹಾಯಕ | 17,560/- |
| 19 | ಆರ್.ದೀಪಾ, ಬೆರಳಚ್ಚುಗಾರ್ತಿ<br>ಸಾರಿಗೆ-1 | 17,405/- |
| 20 | ದಲಾಯತ್ / ಗ್ರೂಪ್ ಡಿ (ಖಾಲಿ) | ಖಾಲಿ |
| 21 | ಆರ್.ಪ್ರಭುಶಂಕರ್<br>ಪೀಠಾಧಿಕಾರಿ<br>ಸಾರಿಗೆ-2 ಶಾಖೆ | 49,300/- |
| 22 | ವೈ.ಜಿ.ಕಾಂತವೀರಯ್ಯ, ಹಿರಿಯ ಸಹಾಯಕ | 37.596 |
| 23 | ಪಿ. ಚಂದ್ರಕಾಂತ<br>ಸಹಾಯಕ ಸಾರಿಗೆ-2 ಶಾಖೆ | 25,200 |
| 24 | ನಾರಾಯಣಸ್ವಾಮಿ.ಎಸ್<br>ಸಹಾಯಕ,ಸಾರಿಗೆ-2 ಶಾಖೆ | 27,102/- |
| 25 | ಶ್ವೇತಾ<br>ಬೆರಳಚ್ಚುಗಾರರು,ಸಾರಿಗೆ-2 ಶಾಖೆ | 18,101/- |
| 26 | ದಲಾಯತ್/ ಗ್ರೂಪ್ ಡಿ (ಖಾಲಿ) | |
| 27 | ವಸಂತಕುಮಾರ<br>ಶಾಖಾಧಿಕಾರಿ<br>ಸ್ಟೀಮರ ಶಾಖೆ | 44,580/- |

| ಕ್ರ. ಸಂ. | ಪದನಾಮ | ಒಟ್ಟು ವೇತನ ರೂ.ಗಳಲ್ಲಿ |
|---|---|---|
| 28 | ಸಹಾಯಕ | ಖಾಲಿ |
| 29 | ಬಸವರೆಡ್ಡಿ ಕೊಪ್ಪದ ಕಿರಿಯ ಸಹಾಯಕ | 17560/– |
| 30 | ಕಿರಿಯ ಸಹಾಯಕ | ಖಾಲಿ |
| 31 | ಜಮೇದಾರ್ / ದಲಾಯತ್ | ಖಾಲಿ |
| 32 | ಜಮೇದಾರ್ / ದಲಾಯತ್ | ಖಾಲಿ |
| 33 | ಪ್ರೇಮಕುಮಾರಿ ಬೆರಳಚ್ಚುಗಾರ್ತಿ | 37,698/– |

ಟಿಪ್ಪಣಿ:– ಆಂತರಿಕ ಹಣಕಾಸು ಸಲಹೆಗಾರರು (ಐಎಫ್‌ಎ) ಶಾಖೆ ಮತ್ತು ಕಾನೂನು ಮುಖ್ಯ ಶಾಖೆಯ ಸಂಬಂಧದಲ್ಲಿನ ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆಯನ್ನು ಗೃಹ ಇಲಾಖೆಯಿಂದ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.

**(xi)** ಎಲ್ಲ ಯೋಜನೆಗಳು, ಉದ್ದೇಶಿತ ವೆಚ್ಚ ಮತ್ತು ಬಟವಾಡೆ ಮಾಡಿದ್ದರ ಬಗೆಗಿನ ವರದಿಗಳ ವಿವರಗಳೊಂದಿಗೆ ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಬಜೆಟ್:

| ಸಾರಿಗೆ ಇಲಾಖೆ | | | | |
|---|---|---|---|---|
| ಯೋಜನೆಯ ಹೆಸರು | ಲೆಕ್ಕ ಶೀರ್ಷಿಕೆ | ಯೋಜನೆ/ ಯೋಜನೇತರ | ನಿಗದಿತ ಅನುದಾನ | ಬಿಡುಗಡೆಗೊಳಿಸಲಾದ ಮೊತ್ತ |
| ಇತರೆ ಸಾರಿಗೆ ಸೇವೆಗಳು ಮಾಲಿನ್ಯ ನಿಯಂತ್ರಣ | 2041-00-101-0-01 | ಯೋಜನೆ | 100.00 | 67.51 |
| ಭಾರಿ ವಾಹನ ಚಾಲನಾ ತರಬೇತಿ ಸಂಸ್ಥೆ ಸ್ಥಾಪನೆ | 5055-00-0550-0-04 | ಯೋಜನೆ | 100.00 | 1076.00 |
| ಸ್ವಯಂಚಾಲಿತ ಚಾಲನಾ ಪರೀಕ್ಷಾ ಪಥ ಸ್ಥಾಪನೆ | 2041-00-800-0-02 | ಯೋಜನೆ | 250.00 | |
| ಪ್ರಾದೇಶಿಕ ಸಾರಿಗೆ ಕಛೇರಿ ಕಟ್ಟಡ ಮತ್ತು ಚಾಲನಾ ಪಥ ನಿರ್ಮಾಣ | 4059-80-051-0-34 | ಯೋಜನೆ | 2510.00 | 2509.53 |
| | | | 5586.73 | 4407.70 |

| 2013–14 ನೇ ಸಾಲಿನಲ್ಲಿ ಸಾರಿಗೆ ಸಂಸ್ಥೆಗಳಿಗೆ ಹಂಚಿಕೆ ಮಾಡಲಾದ ಅನುದಾನದ ವಿವರ | | | | | |
|---|---|---|---|---|---|
| ಕರಾರಸಾಸಂಸ್ಥೆ | | | | | |
| ಯೋಜನೆ | | | ಯೋಜನೇತರ | | |
| ವಿಶೇಷ ಅಭಿವೃದ್ಧಿ ಯೋಜನೆ ಲೆಕ್ಕ ಶೀರ್ಷಿಕೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) | ವಿವಿಧ ರೀತಿಯ ಬಸ್ ಪಾಸುಗಳು ಲೆಕ್ಕ ಶೀರ್ಷಿಕೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) |
| 5055-00-190-1-00 | 1500 | 1500 | 3055-00-190-0-06-07-08-09-10-11 | 22149.91 | 22149.91 |
| ವಾಕರಾರಸಾಸಂಸ್ಥೆ | | | | | |
| ಯೋಜನೆ | | | ಯೋಜನೇತರ | | |
| ವಿಶೇಷ ಅಭಿವೃದ್ಧಿ ಯೋಜನೆ ಲೆಕ್ಕ ಶೀರ್ಷಿಕೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) | ವಿವಿಧ ರೀತಿಯ ಬಸ್ ಪಾಸುಗಳು ಲೆಕ್ಕ ಶೀರ್ಷಿಕೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) |
| 5055-00-190-1-00 | 1500 | 1500 | 3055-00-190-0-04-09-02-07-06-11-08 | 16083.27 | 16083.27 |
| ಈಕರಾರಸಾಸಂಸ್ಥೆ | | | | | |
| ಯೋಜನೆ | | | ಯೋಜನೇತರ | | |
| ವಿಶೇಷ ಅಭಿವೃದ್ಧಿ ಯೋಜನೆ ಲೆಕ್ಕ ಶೀರ್ಷಿಕೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) | ವಿವಿಧ ರೀತಿಯ ಬಸ್ ಪಾಸುಗಳು ಲೆಕ್ಕ ಶೀರ್ಷಿಕೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) |
| 5055-00-190-2-00 | 1500 | 1500 | 3055-00-190-0-05-09-02-07-06-11-08 | 11192.17 | 11192.17 |

| ಬೆಂಮನಸಾಸಂಸ್ಥೆ | | |
|---|---|---|
| ಯೋಜನೇತರ | | |
| ವಿವಿಧ ರೀತಿಯ ಬಸ್ ಪಾಸುಗಳು ಲೆಕ್ಕ ಶೀರ್ಷಿಕೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) |
| 3055-00-190-0-03-09-08-07-06-11 | 16498.42 | 16498.42 |
| ಡಿಡಿಯುಟಿಟಿಎಲ್ | | |
| ಯೋಜನೆ | | |
| ಟ್ರಕ್ ಟರ್ಮಿನಲ್‌ಗಳ ನಿರ್ಮಾಣಕ್ಕಾಗಿ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) |
| 5055-00-050-0-02-386 | 1782.00 | 500.00 |
| ನರ್ಮ್ (ಸಾರಿಗೆ ಸಂಸ್ಥೆಗಳಿಗೆ) | | |
| ನಗರ ಸಾರಿಗೆಯ ಮೂಲಭೂತ ಸೌಕರ್ಯಗಳಿಗೆ | ಹಂಚಿಕೆ (ರೂ.ಲಕ್ಷಗಳಲ್ಲಿ) | ಬಿಡುಗಡೆ (ರೂ.ಲಕ್ಷಗಳಲ್ಲಿ) |
| 5055-00-800-0-01 | 2600.00 | 2600.00 |

**(xii) ಹಂಚಿಕೆ ಮಾಡಿದ ಮೊತ್ತದೊಂದಿಗೆ ಸಹಾಯಕ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ ಮತ್ತು ಅಂತಹ ಕಾರ್ಯಕ್ರಮಗಳ ಫಲಾನುಭವಿಗಳ ವಿವರಗಳು:**

ಸಾರಿಗೆ ಸಚಿವಾಲಯವು ಯಾವುದೇ ಸಹಾಯಕ ಕಾರ್ಯಕ್ರಮವನ್ನು ನೇರವಾಗಿ ನಿರ್ವಹಿಸುವುದಿಲ್ಲ. ಆದರೆ ಇದು ಸಹಾಯಕ ಕಾರ್ಯಕ್ರಮಗಳಿಗೆ ನಿಧಿಗಳನ್ನು ಮಂಜೂರು ಮಾಡುತ್ತದೆ.

**(xiii) ರಿಯಾಯಿತಿಗಳು, ಪರ್ಮಿಟ್ಟುಗಳು ಅಥವಾ ಅಧಿಕಾರ ಪತ್ರ ಪಡೆದುಕೊಂಡವರ ವಿವರಗಳು:**

ಸಾರಿಗೆ ಸಚಿವಾಲಯವು ಬಾಬ್ತು ಸಂ. (xii) ರಲ್ಲಿ ವಿವರಿಸಲಾದಂತಹ ನಿಧಿಗಳನ್ನು ಮಂಜೂರು ಮಾಡುತ್ತದೆ. ಮೋಟಾರು ವಾಹನಗಳ ಅಧಿನಿಯಮದ ಪ್ರಕಾರ ಮೋಟಾರು ವಾಹನಗಳಿಗೆ ಪರ್ಮಿಟ್ಟುಗಳನ್ನು ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ) ಯಿಂದ ಮಂಜೂರು ಮಾಡಲಾಗುತ್ತದೆ.

**(xiv) ವಿದ್ಯುನ್ಮಾನ ರೂಪದಲ್ಲಿ ಹೊಂದಿರುವ ಮಾಹಿತಿಯ ಸಂಬಂಧದಲ್ಲಿನ ವಿವರಗಳು:**

ಇಲ್ಲ.

**(xv) ಸಾರ್ವಜನಿಕ ಉಪಯೋಗಕ್ಕಾಗಿ ಗ್ರಂಥಾಲಯ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದರೆ ಅವುಗಳು ಸೇರಿದಂತೆ ಇತರ ಮಾಹಿತಿಯನ್ನು ಪಡೆದುಕೊಳ್ಳುವುದಕ್ಕಾಗಿ ನಾಗರೀಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರಗಳು: ಸಾರಿಗೆ ಸಚಿವಾಲಯವು ಯಾವುದೇ ಅಂತಹ ಗ್ರಂಥಾಲಯವನ್ನು ನಿರ್ವಹಿಸುತ್ತಿಲ್ಲ.**

**(xvi) ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು, ಪದನಾಮ ಮತ್ತು ಇತರೆ ವಿವರಗಳು:**

**1) ಮೊದಲನೆ ಮೇಲ್ಮನವಿ ಪ್ರಾಧಿಕಾರ:–**

**ಶ್ರೀ ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ
ಕರ್ನಾಟಕ ಸರ್ಕಾರದ ಸಚಿವಾಲಯ, 1ನೇ ಮಹಡಿ, ಕೊಠಡಿ ಸಂಖ್ಯೆ: 125
ಬಹುಮಹಡಿ ಕಟ್ಟಡ, ಬೆಂಗಳೂರು–560 001, ದೂರವಾಣಿ ನಂ. 080–22032292.

**2) ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು, ಪದನಾಮ ಮತ್ತು ಇತರೆ ವಿವರಗಳು:**

**(1) ಶ್ರೀ ಪ್ರಭುಶಂಕರ್**
ಪೀಠಾಧಿಕಾರಿ, ಸಾರಿಗೆ ಶಾಖೆ–2
ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, 1ನೇ ಮಹಡಿ, ಕೊಠಡಿ ಸಂಖ್ಯೆ: 122,
ಬಹುಮಹಡಿ ಕಟ್ಟಡ, ಬೆಂಗಳೂರು 560 001, ದೂರವಾಣಿ ಸಂ: 080–22032014.

**(2) ಶ್ರೀ ದೇವರಾಜು. ಎಂ**
ಶಾಖಾಧಿಕಾರಿ, ಸಾರಿಗೆ ಶಾಖೆ–1
ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, 1ನೇ ಮಹಡಿ, ಕೊಠಡಿ ಸಂಖ್ಯೆ: 101,
ಬಹುಮಹಡಿ ಕಟ್ಟಡ, ಬೆಂಗಳೂರು 560 001, ದೂರವಾಣಿ ಸಂ: 080–22032914.

**(3) ಶ್ರೀ ವಸಂತಕುಮಾರ**
ಶಾಖಾಧಿಕಾರಿ, ಸಮನ್ವಯ ಶಾಖೆ
ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, 1ನೇ ಮಹಡಿ, ಕೊಠಡಿ ಸಂಖ್ಯೆ: 101,
ಬಹುಮಹಡಿ ಕಟ್ಟಡ, ಬೆಂಗಳೂರು 560 001, ದೂರವಾಣಿ ಸಂ: 080–22032336.

**3) ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮಗಳು ಮತ್ತು ಇತರ ವಿವರಗಳು:**

**1) ಶ್ರೀ ವೈ.ಜಿ. ಕಾಂತವೀರಯ್ಯ,**
ಹಿರಿಯ ಸಹಾಯಕರು, ಸಾರಿಗೆ–2 ಶಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ, ಕೊಠಡಿ ಸಂಖ್ಯೆ:122, 1ನೇ ಮಹಡಿ,
ಬಹುಮಹಡಿ ಕಟ್ಟಡ, ಬೆಂಗಳೂರು–01, ದೂರವಾಣಿ ಸಂ:080–22032014.

**2) ಶ್ರೀ ಪಿ.ಶಿವಕೇಶವ**
ಸಹಾಯಕರು, ಸಾರಿಗೆ–1 ಶಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ, ಕೊಠಡಿ ಸಂಖ್ಯೆ:101, 1ನೇ ಮಹಡಿ,
ಬಹುಮಹಡಿ ಕಟ್ಟಡ, ಬೆಂಗಳೂರು–01, ದೂರವಾಣಿ ಸಂ:080–22032914.

(xvii) **ಗೊತ್ತುಪಡಿಸಬಹುದಾದಂತಹ ಇತರೆ ಮಾಹಿತಿ** –ಇಲ್ಲ–

**ಮಾಹಿತಿ ಹಕ್ಕು ಅಧಿನಿಯಮ 2005 ರ ಕಲಂ 4(1) (ಎ)ರ ಪಾಲನೆಗೆ ಸಂಬಂಧಿಸಿದಂತೆ ಮಾಹಿತಿ ಕಡತ ಪಟ್ಟಿ –**
**ಕಡತ ಶೀರೋನಾಮೆ ವರ್ಷವಾರು ಇಲಾಖೆ**
**ಮಾಹಿತಿ ಹಕ್ಕು ಅದಿನಿಯಮ 2005 ಸೆಕ್ಷನ್ 4 (1) (ಎ)**
**ಸಾರಿಗೆ ಸಚಿವಾಲಯದಲ್ಲಿ ವ್ಯವಹರಿಸುವ ಕಡತಗಳ ಶೀರ್ಷಿಕೆಗಳು ಈ ಕೆಳಕಂಡಂತಿವೆ:**

| | ಕಡತಗಳ ಶೀರ್ಷಿಕೆ ಕನ್ನಡ ಭಾಷೆಯಲ್ಲಿ | ಕಡತಗಳ ಶೀರ್ಷಿಕೆ ಆಂಗ್ಲ ಭಾಷೆಯಲ್ಲಿ |
|---|---|---|
| ಸಾರಿಗೆ–1 ಶಾಖೆ | ಸಾಸಂಇ | SASME |
| | ಸಾಸಂಸೇ | SASMSE |
| | ಸಾಸಂಯೋ | SASMYO |
| | ಸಾಸಂಬಿ | SASMB |
| | ಸಾಸಂವಿ | SASMV |
| | ಸಾಸಂಪ್ರ | SASMPRA |
| | ನಸಾಇ | NASAE |
| | ನಸಾಯೋ | NASAYO |
| | ನಸಾಸೇ | NASASE |
| | ವಾಈಸೇ | VAESE |
| | ವಾಈಮ | VAEMA |
| | ವಾಈನ್ಯಾ | VAENYA |

**ಸಾರಿಗೆ 2 ಶಾಖೆಯಲ್ಲಿ ವ್ಯವಹರಿಸುವ ಕಡತಗಳ ಶೀರ್ಷಿಕೆಗಳು ಈ ಕೆಳಕಂಡಂತಿವೆ:**

| ಶಾಖೆ | ಕಡತಗಳ ಶೀರ್ಷಿಕೆ ಕನ್ನಡ ಭಾಷೆಯಲ್ಲಿ | ಕಡತಗಳ ಶೀರ್ಷಿಕೆ ಆಂಗ್ಲ ಭಾಷೆಯಲ್ಲಿ |
|---|---|---|
| ಸಾರಿಗೆ–2 | ಸಾಇಸೇ | SAESE |
| | ಸಾಇನ್ಯಾ | SAENYA |
| | ಸಾಇಪ್ರ | SAEPRA |
| | ಸಾಇಪ | SAEPA |
| | ಸಾಇನಿ | SAENI |

**ಸಾರಿಗೆ ಸ್ವೀಕೃತಿ ಮತ್ತು_ರವಾನೆ_ಶಾಖೆಯಲ್ಲಿ ವ್ಯವಹರಿಸುವ ಕಡತಗಳ ಶೀರ್ಷಿಕೆಗಳು ಈ ಕೆಳಕಂಡಂತಿವೆ:**

| ಶಾಖೆ | ಕಡತಗಳ ಶೀರ್ಷಿಕೆ ಕನ್ನಡ ಭಾಷೆಯಲ್ಲಿ | ಕಡತಗಳ ಶೀರ್ಷಿಕೆ ಆಂಗ್ಲ ಭಾಷೆಯಲ್ಲಿ |
|---|---|---|
| ಸಾರಿಗೆ ಸ್ವೀಕೃತಿ ಮತ್ತು_ರವಾನೆ | ಸ್ವೀರಸ | **RIC** |

**ಕಡತಗಳ ವಿವರಗಳನ್ನು ಸಾರಿಗೆ ಇಲಾಖೆಯ ಅಧಿಕೃತ ವೆಬ್‌ಸೈಟ್** www.karnataka.gov.in/transport-secretariat/ **ನಲ್ಲಿ ನೋಡಬಹುದಾಗಿದೆ.**

**ಕೆ.ಬೀರೇಶ್**
**ಸರ್ಕಾರದ ಅಧೀನ ಕಾರ್ಯದರ್ಶಿ**
**ಸಾರಿಗೆ ಇಲಾಖೆ.**

**P.R. 503**
**SC - 200**

## ಕರ್ನಾಟಕ ರಾಜ್ಯಪಾಲರ ಸಚಿವಾಲಯ

## ಅಧಿಸೂಚನೆ

**ಕ್ರಮಾಂಕ: ಜಿಎಸ್ 48 ಇಎಸ್‌ಟಿ 2014, ಬೆಂಗಳೂರು ದಿನಾಂಕ: 15ನೇ ಮೇ, 2014**

**ವಿಷಯ :–** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರಡಿಯಲ್ಲಿ ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿನ ವಿವಿಧ ವೃಂದಗಳಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಶೇ. 8ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು

ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ)ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ 13ರ ಅನ್ವಯ ಕರ್ನಾಟಕ ರಾಜ್ಯಪಾಲರ ಸಚಿವಾಲಯವೂ ರಾಜ್ಯ ಮಟ್ಟದ ಕಛೇರಿಯೆಂದು ಗುರುತಿಸಲಾಗಿದ್ದು, ಸದರಿ ಕಛೇರಿಯ ಸೇವೆಯಲ್ಲಿನ ಹುದ್ದೆಗಳಿಗೆ ವೃಂದಗಳವಾರು ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಶೇ. 8ರಷ್ಟು ಹುದ್ದೆಗಳನ್ನು ಅನುಬಂಧದಲ್ಲಿ ಸೂಚಿಸಿರುವಂತೆ ಈ ಮೂಲಕ ಅಧಿಸೂಚಿಸಲಾಗಿದೆ.

**ಕಲ್ಪನ ಆರ್.**
ರಾಜ್ಯಪಾಲರ ಅಧೀನ ಕಾರ್ಯದರ್ಶಿ (ಆಡಳಿತ)

## ಅನುಬಂಧ

| ಕ್ರ.ಸಂ. | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ (ವೃಂ ಮತ್ತು ನೇ ನಿಯಮದ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ. 8ರಷ್ಟು ಹುದ್ದೆಗಳು | | | ಷರಾ |
|---|---|---|---|---|---|---|---|---|---|
| | | | | | | ಮುಂಬಡ್ತಿ | ನೇ.ನೇ. | ಒಟ್ಟು | |
| **1** | **2** | **3** | **4** | **5** | **6** | **7** | **8** | **9** | **10** |
| 1. | ರಾಜ್ಯಪಾಲರ ಕಾರ್ಯದರ್ಶಿ | – | 1 | – | – | – | – | – | ಸೂಪರ್ ಟೈಂ ಸ್ಕೇಲ್ ಐಎಎಸ್ ಅಧಿಕಾರಿಯವರ ನಿಯೋಜನೆಯಿಂದ ತುಂಬಲಾಗುವುದು |
| 2. | ರಾಜ್ಯಪಾಲರ ಆಪ್ತ ಕಾರ್ಯದರ್ಶಿ | – | 1 | – | – | – | – | – | ಯಾವುದೇ ರಾಜ್ಯ ನಾಗರೀಕ ಸೇವೆ ಅಥವಾ ಕೇಂದ್ರ ನಾಗರೀಕ ಸೇವೆಯ ಅಧಿಕಾರಿಯ ನಿಯೋಜನೆಯಿಂದ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಲಾಗುವುದು |
| 3. | ರಾಜ್ಯಪಾಲರ ಉಪ ಕಾರ್ಯದರ್ಶಿ | 40050–1050–45300–1200–52500–1350–56550 | 1 | – | – | – | – | – | ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅಥವಾ ತತ್ಸಮಾನ ದರ್ಜೆಯ ರಾಜ್ಯದ ಯಾವುದೇ ನಾಗರೀಕ ಸೇವೆಯ ಅಧಿಕಾರಿಯ ನಿಯೋಜನೆಯಿಂದ ಭರ್ತಿ ಮಾಡಲಾಗುವುದು |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 4. | ರಾಜ್ಯಪಾಲರ ಎ.ಡಿ.ಸಿ | 40050–1050–45300–1200–52500–1350–56550 | 2 | – | – | – | – | – | ಕೇಂದ್ರ ಸಶಸ್ತ್ರ ಕ್ಯಾಪ್ಟನ್ ಅಥವಾ ಮೇಜರ್ ಅಥವಾ ತತ್ಸಮಾನ ಹುದ್ದೆಯ ಅಧಿಕಾರಿ ಅಥವಾ ಕರ್ನಾಟಕ ರಾಜ್ಯ ಆರಕ್ಷಕ ಸೇವೆಯ ಡೆಪ್ಯುಟಿ ಸೂಪರಿಂಟೆಂಡೆಂಟ್ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ ಅಥವಾ ಸೂಪರಿಂಟೆಂಡೆಂಟ್ ದರ್ಜೆಯ ರಾಜ್ಯದ ಐಪಿಎಸ್ ಅಧಿಕಾರಿಯ ನಿಯೋಜನೆಯಿಂದ ಭರ್ತಿ ಮಾಡಲಾಗುವುದು |
| 5. | ರಾಜ್ಯಪಾಲರ ಅಧೀನ ಕಾರ್ಯದರ್ಶಿ | 28100–700–28800–800–33600–900–39000–1050–45300–1200–50100 | 2 | – | – | – | – | – | ಕ.ಸ.ಸ. ಸೇವೆಯ ಅ.ಕಾ. ದರ್ಜೆ ಅಧಿಕಾರಿ ಅಥವಾ ಕೆಎಎಸ್ ಕ್ಲಾಸ್–1 (ಕಿರಿಯ ಶ್ರೇಣಿ) ಅಧಿಕಾರಿಯವರಿಂದ ಭರ್ತಿ ಮಾಡಲಾಗುವುದು |
| 6. | ವಿಶೇಷ ಕರ್ತವ್ಯಾಧಿಕಾರಿ | ವೇತನ ಶ್ರೇಣಿ ರಹಿತ ಹುದ್ದೆ | 1 | – | – | – | – | – | – |
| 7. | ರಾಜ್ಯಪಾಲರ ಸರ್ಜನ್ | 28100–700–28800–800–33600–900–39000–1050–45300–1200–50100 | 1 | – | – | – | – | – | ಕರ್ನಾಟಕ ರಾಜ್ಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಸೇವೆಗಳು ಅಥವಾ ವೈದ್ಯಕೀಯ ಶಿಕ್ಷಣ ಸೇವೆಯ ಸಹಾಯಕ ಸರ್ಜನ್ ಅಥವಾ ತತ್ಸಮಾನ ದರ್ಜೆಯ ಅಧಿಕಾರಿಯ ನಿಯೋಜನೆಯಿಂದ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಲಾಗುವುದು |
| 8. | ಶಾಖಾಧಿಕಾರಿ | 22800–600–24600–700–28800–800–33600–900–39000–1050–43200 | 4 | – | – | – | – | – | ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿರುವ ಶಾಖಾಧಿಕಾರಿಗಳ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು |
| 9. | ರಾಜ್ಯಪಾಲರ ಆಪ್ತ ಸಹಾಯಕ | 22800–600–24600–700–28800–800–33600–900–39000–1050–43200 | 2 | – | – | – | – | – | ರಾಜ್ಯದ ಯಾವುದೇ ನಾಗರೀಕ ಸೇವೆ ಅಥವಾ ಕೇಂದ್ರ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಅಧಿಕಾರಿಯ ನಿಯೋಜನೆಯಿಂದ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಲಾಗುವುದು |
| 10. | ವ್ಯವಸ್ಥಾಪಕರು, ರಾಜ್ಯಪಾಲರ ಮನೆವಾರ್ತೆ ವಿಭಾಗ | 20000–500–21000–600–24600–700–28800–800–33600–900–36300 | 1 | – | 1 | – | – | – | ನೇರ ನೇಮಕಾತಿ ಅಥವಾ ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿರುವ ಹಿರಿಯ ಸಹಾಯಕರ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು. ನೇರ ನೇಮಕಾತಿಗಾಗಿ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು ಹಾಗೂ ಸರ್ಕಾರದ ಯಾವುದೇ ಇಲಾಖೆಯಲ್ಲಿ ಹೌಸ್ ಕೀಪಿಂಗ್‌ನಲ್ಲಿ 3 ವರ್ಷಗಳ ಅನುಭವ ಇರತಕ್ಕದ್ದು. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 11. | ಹಿರಿಯ ಸಹಾಯಕ/ ಕ್ಯಾಷಿಯರ್ / ಅಕೌಂಟೆಂಟ್ | 20000–500–21000–600–24600–700–28800–800–33600–900–36300 | 4 | – | – | – | – | – | ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿರುವ ಹಿರಿಯ ಸಹಾಯಕರ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು. ಕ.ಸ.ಸ. ಸೇವೆಗೆ ಸೇರಿದ ಹಿರಿಯ ಸಹಾಯಕರು ಲಭ್ಯವಿಲ್ಲದಿದ್ದಲ್ಲಿ, ರಾಜ್ಯದ ಇತರ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆಯಿಂದ ಭರ್ತಿ ಮಾಡಲಾಗುವುದು |
| 12. | ಸೀನಿಯರ್ ಸ್ಟೀವರ್ಡ್ | 20000–500–21000–600–24600–700–28800–800–33600–900–36300 | 1 | 1 | – | – | – | – | ಸ್ಟೀವರ್ಡ್ ಹುದ್ದೆಯಿಂದ ಮುಂಬಡ್ತಿ ಮುಖಾಂತರ ಭರ್ತಿ ಮಾಡಲಾಗುವುದು. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |
| 13. | ಸ್ಟಾಫ್ ನರ್ಸ್ | 17650–450–19000–500–21000–600–24600–700–28800–800–32000 | 1 | – | – | – | – | – | ರಾಜ್ಯ ಆರೋಗ್ಯ ಇಲಾಖೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆಯಿಂದ ಭರ್ತಿ ಮಾಡಲಾಗುವುದು |
| 14. | ಸಹಾಯಕ | 16000–400–17200–450–19000–500–21000–600–24600–700–28800–800–29600 | 8 | 2 | – | – | – | – | ಶೇಕಡಾ 75ರಷ್ಟು ಅಂದರೆ 6 ಹುದ್ದೆಗಳನ್ನು ಕ.ಸ.ಸ. ಸೇವೆಗೆ ಸೇರಿರುವ ಸಹಾಯಕರಿಂದ ನಿಯೋಜನೆ ಮೂಲಕ ಭರ್ತಿ ಮಾಡಬಹುದಾಗಿದೆ. ಕ.ಸ.ಸ. ಸೇವೆಗೆ ಸೇರಿರುವ ಸಹಾಯಕರು ಲಭ್ಯವಿರದಿದ್ದಲ್ಲಿ, ರಾಜ್ಯದ ಯಾವುದೇ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು. ಶೇಕಡಾ 25ರಷ್ಟು ಹುದ್ದೆಗಳನ್ನು ಮಾತ್ರ ಅಂದರೆ 2 ಹುದ್ದೆಗಳನ್ನು ರಾಜ್ಯಪಾಲರ ಸಚಿವಾಲಯದ ಕಿರಿಯ ಸಹಾಯಕರ ಮುಂಬಡ್ತಿ ಮೂಲಕ ತುಂಬಬಹುದಾಗಿದ್ದು, 2 ಹುದ್ದೆಯ ಶೇಕಡಾ 8 = 0.16 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |
| 15. | ಶೀಘ್ರಲಿಪಿಗಾರರು | 16000–400–17200–450–19000–500–21000–600–24600–700–28800–800–29600 | 6 | – | – | – | – | – | ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿರುವ ಶೀಘ್ರಲಿಪಿಗಾರರ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು. ಕ.ಸ.ಸ. ಸೇವೆಯ ಸಿಬ್ಬಂದಿ ದೊರಕದಿದ್ದಲ್ಲಿ ರಾಜ್ಯದ ಯಾವುದೇ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 16. | ಸ್ಟೀವರ್ಡ್ | 14550–350–15600–400–17200–450–19000–500–21000–600–24600–700–26700 | 1 | 1 | – | – | – | – | ಹೆಡ್ ಕುಕ್ ಹುದ್ದೆಯಿಂದ ಮುಂಬಡ್ತಿ ಮುಖಾಂತರ ಅಥವಾ ರಾಜ್ಯದ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆಯ ಮುಖಾಂತರ ಅಥವಾ ನೇರ ನೇಮಕಾತಿ ಮುಖಾಂತರ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಲಾಗುವುದು. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸಲು ಅಗತ್ಯವಿರುವುದಿಲ್ಲ |
| 17. | ಗ್ರಂಥಾಲಯ ಸಹಾಯಕರು | 11600–200–12000–250–13000–300–14200–350–15600–400–17200–450–19000–500–21000 | 1 | – | – | – | – | – | ಸಾರ್ವಜನಿಕ ಗ್ರಂಥಾಲಯಗಳು ಇಲಾಖೆಯ ಸಿಬ್ಬಂದಿಯ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು |
| 18. | ಸೀನಿಯರ್ ಡ್ರೈವರ್ | 14500–350–15600–400–17200–450–19000–500–21000–600–24600–700–26700 | 1 | 1 | – | – | – | – | ಡ್ರೈವರ್ ಹುದ್ದೆಯಿಂದ ಮುಂಬಡ್ತಿ ಮುಖಾಂತರ ಅಥವಾ ರಾಜ್ಯದ ಇತರೆ ನಾಗರೀಕ ಸೇವೆಯ ಸೀನಿಯರ್ ಡ್ರೈವರ್ ನಿಯೋಜನೆ ಮುಖಾಂತರ ಭರ್ತಿ ಮಾಡಲಾಗುವುದು. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸಲು ಅಗತ್ಯವಿರುವುದಿಲ್ಲ |
| 19. | ಕಾಂಪೌಂಡರ್ / ಫಾರ್ಮಾಸಿಸ್ಟ್ | 12500–250–13000–300–14200–350–15600–400–17200–450–19000–500–21000–600–24000 | 1 | – | – | – | – | – | ರಾಜ್ಯ ಆರೋಗ್ಯ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು |
| 20. | ಕಿರಿಯ ಸಹಾಯಕರು | 11600–200–12000–250–13000–300–14200–350–15600–400–17200–450–19000–500–21000 | 8 | 3 | – | – | – | – | ಶೇಕಡಾ 67ರಷ್ಟು ಹುದ್ದೆಗಳನ್ನು ಅಂದರೆ 5 ಹುದ್ದೆಗಳನ್ನು ಕ.ಸ.ಸ. ಸೇವೆಗೆ ಸೇರಿರುವ ಕಿರಿಯ ಸಹಾಯಕರ ನಿಯೋಜನೆ ಮೂಲಕ ಭರ್ತಿ ಮಾಡಬಹುದಾಗಿದೆ. ಕ.ಸ.ಸ. ಸೇವೆಗೆ ಸೇರಿರುವ ಕಿರಿಯ ಸಹಾಯಕರು ಲಭ್ಯವಿರದಿದ್ದಲ್ಲಿ, ರಾಜ್ಯದ ಯಾವುದೇ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು. ಶೇಕಡಾ 33ರಷ್ಟು ಹುದ್ದೆಗಳನ್ನು ಮಾತ್ರ ಅಂದರೆ 3 ಹುದ್ದೆಗಳನ್ನು ರಾಜ್ಯಪಾಲರ ಸಚಿವಾಲಯದ ಕಿರಿಯ ಸಹಾಯಕರ ಮುಂಬಡ್ತಿ ಮೂಲಕ ತುಂಬಬಹುದಾಗಿದ್ದು, 3 ಹುದ್ದೆಯ ಶೇಕಡಾ 8 = 0.24 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 21. | ವಾಹನ ಚಾಲಕರು | 11600–200–12000–250–13000–300–14200–350–15600–400–17200–450–19000–500–21000 | 11 | ಮುಂಬಡ್ತಿ ಅಥವಾ ನೇರ ನೇಮಕಾತಿ ಮೂಲಕ ತುಂಬಬಹುದೆಂದು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿಳಿಸಿದ್ದು, ಶೇಕಡಾವಾರು ನಿಗದಿಪಡಿಸಿರುವುದಿಲ್ಲ. | | – | – | 1 | **ಸದರಿ ಹುದ್ದೆಯನ್ನು ಯಾವುದೇ 'ಡಿ' ದರ್ಜೆ ನೌಕರರ ಬಡ್ತಿ ಮುಖಾಂತರವಾಗಲೀ ನೇರ ನೇಮಕಾತಿ ಮುಖಾಂತರವಾಗಲೀ ತುಂಬಬಹುದಾಗಿದ್ದು, ಮುಂಬಡ್ತಿ ಹಾಗೂ ನೇರ ನೇಮಕಾತಿ ಸಲುವಾಗಿ ಇಂತಿಷ್ಟೇ ಹುದ್ದೆಗಳನ್ನು ಶೇಕಡಾವಾರು ನಿಗದಿಪಡಿಸಿರುವುದಿಲ್ಲ. ಆದುದರಿಂದ, ಒಟ್ಟು ಒಂದು ಹುದ್ದೆಯನ್ನು ಹೈ–ಕ ಪ್ರದೇಶದವರಿಗಾಗಿ ಮೀಸಲಾಗಿರಿಸಲಾಗಿದೆಯೆಂದು ತಿಳಿಸಲಾಗಿದೆಯೇ ಹೊರತು ಮುಂಬಡ್ತಿಯಲ್ಲಿಯೇ ಅಥವಾ ನೇರ ನೇಮಕಾತಿಯಲ್ಲಿಯೇ ಎಂಬುದನ್ನು ಸೂಚಿಸಿರುವುದಿಲ್ಲ.** ಸದರಿ ಹುದ್ದೆಗಳನ್ನು ರಾಜ್ಯದ ಯಾವುದೇ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮೇಲೆ ಅಥವಾ ಗುತ್ತಿಗೆ ಆಧಾರದ ಮೇಲೆ ಸಹಾ ಭರ್ತಿ ಮಾಡಲು ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ |
| 22. | ವಾಹನ ಚಾಲಕರು–ಕಮ್–ಮೋಟಾರ್ ಸೈಕ್ಲಿಸ್ಟ್ | 11600–200–12000–250–13000–300–14200–350–15600–400–17200–450–19000–500–21000 | 1 | – | 1 | – | – | – | ಸದರಿ ಹುದ್ದೆಯನ್ನು ನೇರ ನೇಮಕಾತಿ ಅಥವಾ ರಾಜ್ಯದ ಯಾವುದೇ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ನಿಗದಿಪಡಿಸಿರುವುದಿಲ್ಲ. |
| 23. | ಹೆಡ್ ಕುಕ್ | 11600–200–12000–250–13000–300–14200–350–15600–400–17200–450–19000–500–21000 | 1 | ಮುಂಬಡ್ತಿ ಅಥವಾ ನೇರ ನೇಮಕಾತಿ ಮೂಲಕ ತುಂಬಬಹುದೆಂದು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿಳಿಸಲಾಗಿದೆ. | | – | – | – | ಸದರಿ ಹುದ್ದೆಯನ್ನು ಕುಕ್ ದರ್ಜೆಯಿಂದ ಮುಂಬಡ್ತಿ ಮುಖಾಂತರ ಅಥವಾ ನೇರ ನೇಮಕಾತಿ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸಲು ಅಗತ್ಯವಿರುವುದಿಲ್ಲ |
| 24. | ಹೆಡ್ ಬಟ್ಲರ್ | 11600–200–12000–250–13000–300–14200–350–15600–400–17200–450–19000–500–21000 | 1 | ಮುಂಬಡ್ತಿ ಅಥವಾ ನೇರ ನೇಮಕಾತಿ ಮೂಲಕ ತುಂಬಬಹುದೆಂದು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿಳಿಸಲಾಗಿದೆ. | | – | – | – | ಸದರಿ ಹುದೆಯನ್ನು ಬಟ್ಲರ್ ದರ್ಜೆಯಿಂದ ಮುಂಬಡ್ತಿ ಮುಖಾಂತರ ಅಥವಾ ನೇರ ನೇಮಕಾತಿ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸಲು ಅಗತ್ಯವಿರುವುದಿಲ್ಲ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 25. | ಬೆರಳಚ್ಚುಗಾರರು | 11600–200–12000–250–13000–300–14200–350–15600–400–17200–450–19000–500–21000 | 3 | – | – | – | – | – | ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿರುವ ಬೆರಳಚ್ಚುಗಾರರ ನಿಯೋಜನೆ ಮೇಲೆ ಭರ್ತಿ ಮಾಡಲಾಗುವುದು. ಕ.ಸ.ಸ. ಸೇವೆಗೆ ಸೇರಿದ ಬೆರಳಚ್ಚುಗಾರರು ಲಭ್ಯವಿಲ್ಲದಿದ್ದಲ್ಲಿ, ಇತರ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯಿಂದ ಭರ್ತಿ ಮಾಡಲಾಗುವುದು |
| 26. | ಹಿಂದಿ ಬೆರಳಚ್ಚುಗಾರರು | 11600–200–12000–250–13000–300–14200–350–15600–400–17200–450–19000–500–21000 | 1 | – | 1 | – | – | – | ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರುವ ಹಿಂದಿ ಭಾಷಾ ಬೆರಳಚ್ಚಿನಲ್ಲಿ ಜೂನಿಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ನಿಮಿಷಕ್ಕೆ 25 ಪದಗಳ ವೇಗದಲ್ಲಿ ಬೆರಳಚ್ಚುಗೊಳಿಸುವ ಅರ್ಹತೆ ಉಳ್ಳವರು. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸಲು ಅಗತ್ಯವಿರುವುದಿಲ್ಲ |
| 27. | ಟೆಲಿಫೋನ್ ಆಪರೇಟರ್ | 11600–200–12000–250–13000–300–14200–350–15600–400–17200–450–19000–500–21000 | 4 | 4 | – | – | – | – | ಸದರಿ ಹುದ್ದೆಯನ್ನು ರಾಜ್ಯದ ಯಾವುದೇ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮುಖಾಂತರ ಅಥವಾ ನೇರ ನೇಮಕಾತಿ ಮುಖಾಂತರ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಬಹುದಾಗಿದೆ. 4 ಹುದ್ದೆಗಳ ಶೇಕಡಾ 8 = 0.32 ಆಗುವುದರಿಂದ ಮೀಸಲಾತಿ ನಿಗದಿಪಡಿಸಲು ಅಗತ್ಯವಿರುವುದಿಲ್ಲ |
| 28. | ಹೆಡ್ ಸ್ವೀಪರ್ | 11000–200–12000–250–13000–300–14200–350–15600–400–7200–450–19000 | 1 | 1 | – | – | – | – | ಸದರಿ ಹುದ್ದೆಯನ್ನು ಸ್ವೀಪರ್ ದರ್ಜೆಯಿಂದ ಮುಂಬಡ್ತಿ ಮುಖಾಂತರ ಅಥವಾ ರಾಜ್ಯದ ಯಾವುದೇ ನಾಗರೀಕ ಸೇವೆಯ ತತ್ಸಮಾನ ದರ್ಜೆಯ ಸಿಬ್ಬಂದಿಯ ನಿಯೋಜನೆ ಮುಖಾಂತರ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸಲು ಅಗತ್ಯವಿರುವುದಿಲ್ಲ |
| 29. | ಜಮೇದಾರ್ | 10400–200–12000–250–13000–300–14200–350–15600–400–16400 | 12 | 12 | – | 1 | – | 1 | ದಲಾಯತ್‌ಗಳ ಮುಂಬಡ್ತಿ ಮುಖಾಂತರ ಅಥವಾ ತತ್ಸಮಾನ ದರ್ಜೆಯ ರಾಜ್ಯದ ಯಾವುದೇ ನಾಗರೀಕ ಸೇವೆಯ ಸಿಬ್ಬಂದಿಯ ನಿಯೋಜನೆಯಿಂದ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಲಾಗುವುದು. 1 ಹುದ್ದೆಯನ್ನು ಹೈ–ಕ ಪ್ರದೇಶದವರಿಗಾಗಿ ನಿಗದಿಪಡಿಸಲಾಗಿದೆ |
| 30. | ರಾಜ್ಯಪಾಲರ ಪರ್ಸನಲ್ ಅಟೆಂಡೆಂಟ್ | 10400–200–12000–250–13000–300–14200–350–15600–400–16400 | 1 | – | – | – | – | – | ಗುತ್ತಿಗೆ ಆಧಾರದ ನೇಮಕಾತಿ –ಸದರಿ ಹುದ್ದೆಯ ಅವಧಿಯ ಘನತೆವೆತ್ತ ರಾಜ್ಯಪಾಲರ ಅವಧಿಯವರೆಗೆ ಇರುತ್ತದೆ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 31. | ಕುಕ್ | 10400–200–12000–250–13000–300–14200–350–15600–400–16400 | 4 | ನೇರ ನೇಮಕಾತಿ ಅಥವಾ ಮುಂಬಡ್ತಿ ಮೂಲಕ ತುಂಬಬಹುದೆಂದು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿಳಿಸಿದ್ದು, ಶೇಕಡಾವಾರು ನಿಗದಿ ಪಡಿಸಿರುವುದಿಲ್ಲ | | – | – | – | ನೇರ ನೇಮಕಾತಿ ಮುಖಾಂತರ ಅಥವಾ ಮಸಾಲ್ಜಿ, ಕಲಾಸಿ ಅಥವಾ ಬೇರರ್ ದರ್ಜೆಯಿಂದ ಮುಂಬಡ್ತಿ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಬಹುದಾಗಿದೆ. 4 ಹುದ್ದೆಗಳ ಶೇಕಡಾ 8 = 0.32 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |
| 32. | ಬಟ್ಲರ್ | 10400–200–12000–250–13000–300–14200–350–15600–400–16400 | 6 | ನೇರ ನೇಮಕಾತಿ ಅಥವಾ ಮುಂಬಡ್ತಿ ಮೂಲಕ ತುಂಬಬಹುದೆಂದು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿಳಿಸಿದ್ದು, ಶೇಕಡಾವಾರು ನಿಗದಿ ಪಡಿಸಿರುವುದಿಲ್ಲ | | | | | ನೇರ ನೇಮಕಾತಿ ಮುಖಾಂತರ ಅಥವಾ ಮಸಾಲ್ಜಿ, ಕಲಾಸಿ ಅಥವಾ ಬೇರರ್ ದರ್ಜೆಯಿಂದ ಮುಂಬಡ್ತಿ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಬಹುದಾಗಿದೆ. 6 ಹುದ್ದೆಗಳ ಶೇಕಡಾ 8 = 0.48 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |
| 33. | ಕಾರ್ಪೆಂಟರ್ | 10400–200–12000–250–13000–300–14200–350–15600–400–16400 | 1 | – | 1 | – | – | – | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |
| | ಪೇಂಟರ್–ಕಮ್–ಪಾಲಿಷರ್ | | 1 | – | 1 | – | – | – | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯ ಶೇಕಡಾ 8 = 0.08 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |
| 34. | ದಲಾಯತ್ | 9600–200–12000–250–13000–300–14200–350–14550 | 14 | – | 14 | – | 1 | 1 | ನೇರ ನೇಮಕಾತಿ ಮೂಲಕ ಅಥವಾ ಕ.ಸ.ಸ.ಕ್ಕೆ ಸೇರಿದ ಅಥವಾ ಯಾವುದೇ ಇತರ ರಾಜ್ಯ ನಾಗರೀಕ ಸೇವೆಗೆ ಸೇರಿದ ಸಿಬ್ಬಂದಿಗಳ ನಿಯೋಜನೆ ಮೂಲಕ ತುಂಬಬಹುದೆಂದು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿಳಿಸಿದ್ದು, 14 ಹುದ್ದೆಗಳನ್ನೂ ನೇರ ನೇಮಕಾತಿ ಮೂಲಕ ತುಂಬುವುದಾದಲ್ಲಿ 1 ಹುದ್ದೆಯನ್ನು ಹೈ–ಕ ಭಾಗದ ಅಭ್ಯರ್ಥಿಗೆ ಮೀಸಲಾಗಿರಿಸಬೇಕಾಗುತ್ತದೆ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 35. | ಬೇರರ್/ಮಸಾಲ್ಜಿ/ಕಲಾಸಿ | 9600–200–12000–250–13000–300–14200–350–14550 | 9 | – | 9 | – | 1 | 1 | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯನ್ನು ಹೈ–ಕ ಭಾಗದ ಅಭ್ಯರ್ಥಿಗೆ ಮೀಸಲಾಗಿರಿಸಲಾಗಿದೆ |
| | | | 5 | – | 5 | – | – | – | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. 5 ಹುದ್ದೆಯ ಶೇಕಡಾ 8=0.40 ಆಗುವುದರಿಂದ ನಿಗದಿಪಡಿಸಿರುವುದಿಲ್ಲ |
| | | | 8 | – | 8 | – | 1 | 1 | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯನ್ನು ಹೈ–ಕ ಭಾಗದ ಅಭ್ಯರ್ಥಿಗೆ ಮೀಸಲಾಗಿರಿಸಲಾಗಿದೆ |
| 36. | ಧೋಬಿ | 9600–200–12000–250–13000–300–14200–350–14550 | 7 | – | 7 | – | 1 | 1 | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯನ್ನು ಹೈ–ಕ ಭಾಗದ ಅಭ್ಯರ್ಥಿಗೆ ಮೀಸಲಾಗಿರಿಸಲಾಗಿದೆ |
| 37. | ಸ್ವೀಪರ್ | 9600–200–12000–250–13000–300–14200–350–14550 | 17 | – | 17 | – | 1 | 1 | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. ಒಂದು ಹುದ್ದೆಯನ್ನು ಹೈ–ಕ ಭಾಗದ ಅಭ್ಯರ್ಥಿಗೆ ಮೀಸಲಾಗಿರಿಸಲಾಗಿದೆ |
| 38. | ಆಯಾ | 9600–200–12000–250–13000–300–14200–350–14550 | 1 | – | – | – | – | – | ಗುತ್ತಿಗೆ ಆಧಾರದ ನೇಮಕಾತಿ – ಸದರಿ ಹುದ್ದೆಯ ಅವಧಿಯು ಘನತೆವೆತ್ತ ರಾಜ್ಯಪಾಲರ ಅವಧಿಯವರೆಗೆ ಇರುತ್ತದೆ |
| 39. | ಕ್ಲೀನರ್ | 9600–200–12000–250–13000–300–14200–350–14550 | 2 | – | 2 | – | – | – | ನೇರ ನೇಮಕಾತಿ ಅಥವಾ ಗುತ್ತಿಗೆ ಆಧಾರದ ಮುಖಾಂತರ ಭರ್ತಿ ಮಾಡಬಹುದಾಗಿದೆ. 2 ಹುದ್ದೆಯ ಶೇಕಡಾ 8=0.16 ಆಗುವುದರಿಂದ ಮೀಸಲಾತಿ ನಿಗದಿಪಡಿಸುವ ಅಗತ್ಯವಿರುವುದಿಲ್ಲ |
| 40. | ಫೀಮೇಲ್/ಮೇಲ್ ನರ್ಸಿಂಗ್ ಆರ್ಡರ್ಲಿ | 9600–200–12000–250–13000–300–14200–350–14550 | 1 | – | – | – | – | – | ರಾಜ್ಯ ನಾಗರೀಕ ಸೇವೆಯ ಫೀಮೇಲ್ /ಮೇಲ್ ನರ್ಸಿಂಗ್ ಆರ್ಡರ್ಲಿಯ ನಿಯೋಜನೆ ಮೂಲಕ ಭರ್ತಿ ಮಾಡಲಾಗುವುದು |
| | | | 1 | – | – | – | – | – | |

**ಕಲ್ಪನ. ಆರ್.**

ರಾಜ್ಯಪಾಲರ ಅಧೀನ ಕಾರ್ಯದರ್ಶಿ (ಆಡಳಿತ)

P.R. 472

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಐ 133 ಎಂಜಿಎಸ್ 2013, ಬೆಂಗಳೂರು, ದಿನಾಂಕ: 08-05-2014.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 133 ಎಂಜಿಎಸ್ 2013 ದಿನಾಂಕ: 17-02-2014ರ ಅನುಬಂಧದ ಕ್ರಮ ಸಂಖ್ಯೆ: 22ರ ಶ್ರೀ ಚೌಡೇಗೌಡ, ಶುಚಿಗಾರ ಇವರ ವಿವರಗಳು ಕಲಂ ನಂ.8 ರಲ್ಲಿ ಇರುವ "**ಶುಚಿಗಾರ 'ಸಿ' ಗುಂಪು**" ಎಂಬುದರ ಬದಲಾಗಿ "**ಶುಚಿಗಾರ 'ಡಿ' ಗುಂಪು**" ಎಂದು ಎಲ್ಲಾ ಸಂದರ್ಭದಲ್ಲಿಯೂ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಕೆ.ವೆಂಕಟೇಶ್,**
**ಪೀಠಾಧಿಕಾರಿ (ಗಣಿ),**
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

P.R- 572
S.C.100

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 63 ಎಲ್‌ಡಬ್ಲ್ಯೂಎ 2014, ಬೆಂಗಳೂರು, ದಿನಾಂಕ: 01-08-2014.**

ಕೈಗಾರಿಕಾ ವಿವಾದಗಳ ಅಧಿನಿಯಮ 1947ರ (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಸೆಕ್ಷನ್ 2 ಖಂಡ (n) ಉಪಖಂಡ (iv)ರ ಮೇರೆಗೆ "**ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ**"ಯನ್ನು ಅಧಿಸೂಚನೆ ಸಂಖ್ಯೆ: ಕಾಇ 01 ಎಲ್‌ಡಬ್ಲ್ಯೂಎ 2014, ದಿನಾಂಕ: 27-01-2014ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ: 15-12-2013 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ: 14) ಸೆಕ್ಷನ್ 2 ಖಂಡ (n) ಉಪಖಂಡ (vi)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "**ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ**"ಯನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ: 15-06-2014 ರಿಂದ ಜಾರಿಗೆ ಬರುವಂತೆ ಮುಂದಿನ 6 ತಿಂಗಳ ಅವಧಿಯವರೆಗೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

P.R- 574

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 64 ಎಲ್‌ಡಬ್ಲ್ಯೂಎ 2014, ಬೆಂಗಳೂರು, ದಿನಾಂಕ: 01-08-2014.**

ಕೈಗಾರಿಕಾ ವಿವಾದಗಳ ಕಾಯಿದೆ 1947ರ (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಸೆಕ್ಷನ್ 2 ಖಂಡ (n) ಉಪಖಂಡ (iv)ರ ಮೇರೆಗೆ "**ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ**"ಯನ್ನು ಅಧಿಸೂಚನೆ ಸಂಖ್ಯೆ: ಕಾಇ 217 ಎಲ್‌ಡಬ್ಲ್ಯೂಎ 2013, ದಿನಾಂಕ: 16-12-2013ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ: 03-12-2013 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಕಾಯಿದೆ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಸೆಕ್ಷನ್ 2 ಖಂಡ (n) ಉಪಖಂಡ (vi)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "**ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ**"ಯನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ: 03-06-2014 ರಿಂದ ಜಾರಿಗೆ ಬರುವಂತೆ ಮುಂದಿನ 6 ತಿಂಗಳ ಅವಧಿಯವರೆಗೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

P.R- 575

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 252 ಪಿಪಿಇ 2014, ಬೆಂಗಳೂರು, ದಿನಾಂಕ: 24-07-2014.**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿನ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳ ಆಯ್ಕೆಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆ 2005ರಡಿ ಸ್ವೀಕೃತವಾಗಿರುವ ಅರ್ಜಿ/ಮೇಲ್ಮನವಿ ಅರ್ಜಿಗಳನ್ನು ವಿಲೇ ಮಾಡಲು ಈ ಕೆಳಕಂಡವರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ/ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ/ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

1) ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರುಗಳ ಆಯ್ಕೆ ಸಮಿತಿಯ ಸದಸ್ಯ ಕಾರ್ಯದರ್ಶಿ ಇವರು ಮಾಹಿತಿ ಹಕ್ಕು ಕಾಯ್ದೆಯ ನಿಯಮ 5(1)ರ ಅನುಸಾರ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿರುತ್ತಾರೆ.
2) ಮಾಹಿತಿ ಹಕ್ಕು ಕಾಯ್ದೆಯ ನಿಯಮ 5(2)ರ ಅನುಸಾರ ಸದರಿ ಕಛೇರಿಯ ಸಿಬ್ಬಂದಿ ಶಾಖೆಯ ಆಡಳಿತಾಧಿಕಾರಿ-1 ಇವರು ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿರುತ್ತಾರೆ.
3) ಮಾಹಿತಿ ಹಕ್ಕು ಕಾಯ್ದೆಯ ನಿಯಮ 19(1)ರ ಅನುಸಾರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ನಿರ್ದೇಶಕರು ಮೇಲ್ಮನವಿ ಪ್ರಾಧಿಕಾರಿಯಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಪೊಲೀಸ್ ಸೇವೆಗಳು-ಬಿ)

P.R- 582
S.C. 50

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ನಅಇ 115 ಬೆಂರೂಪ್ರಾ 2013, ಬೆಂಗಳೂರು, ದಿನಾಂಕ: 09-07-2014.**

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 115 ಬೆಂರೂಪ್ರಾ 2013, ದಿನಾಂಕ: 15-02-2014ರಲ್ಲಿ ಕ್ರಮ ಸಂಖ್ಯೆ: 15ರ ಕಾಲಂ 11ರಲ್ಲಿ ದಿನಾಂಕ: **01-03-1996 ರಿಂದ 01-03-2006ಕ್ಕೆ 10ವರ್ಷ ನಿರಂತರ ಸೇವೆ ಪೂರ್ಣಗೊಂಡಿದ್ದು, ಲಿಟರೇಟ್ ಅಸಿಸ್ಟೆಂಟ್/ಬಿಲ್ಡಿಂಗ್ ಇನ್ಸ್‌ಪೆಕ್ಟರ್ ಆಗಿ ಈ ದಿನಾಂಕದವರೆಗೆ ಸೇವೆ ಸಲ್ಲಿಸುತ್ತಿದ್ದಾರೆ** ಎಂಬುದರ ಬದಲಾಗಿ **ದಿನಾಂಕ: 1-06-1993 ರಿಂದ 31-05-2003ಕ್ಕೆ 10ವರ್ಷ ನಿರಂತರ ಸೇವೆ ಪೂರ್ಣಗೊಂಡಿದ್ದು, ಮಾಲಿಯಾಗಿ ಈ ದಿನಾಂಕದವರೆಗೆ ಸೇವೆ ಸಲ್ಲಿಸುತ್ತಿದ್ದಾರೆ** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಹಾಗೆಯೇ, ಕ್ರಮ ಸಂಖ್ಯೆ: 27ರ ಕಾಲಂ 5ರಲ್ಲಿ ದಿನಾಂಕ: 20-12-1988 ಎಂಬುದರ ಬದಲಾಗಿ ದಿನಾಂಕ:29-06-1992 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಟಿ.ಎಂ.ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

P.R- 583
S.C. 100

*ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59